# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಮೆಚ್ಚಿನ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೧ ಜನೇವರಿ ೨೦೦೯ ಬೆಲೆ : ೧೦ ರೂ/

## ಅಡ್ಡಪಲ್ಲಕ್ಕಿ ಅಯ್ಯಯ್ಯಪ್ಪಗಳ ಕಿತಾಪತಿ !





## ಜೆ.ಎಚ್.ಪಟೇಲ ಕಂಡಂತೆ ಆರ್.ಎಸ್.ಎಸ್.

## ಕಾಂಗ್ರೆಸ್ ಹುಲ್ಲಿನಂತೆ ಬೆಳೆಯುತ್ತಿರುವ ಕನ್ನಡ ಸಂಘಟನೆಗಳು



## ಮೂಡಬಿದರೆಯಲ್ಲೊಬ್ಬ ಬಂಗಾರದ ಮನುಷ್ಯ !



## ಕರಿಬಟ್ಟೆಯ ಯುವಕರು ಅಯ್ಯಯ್ಯಪ್ಪ ಸ್ವಾಮಿಯು

# ಹೊಸ ವರ್ಷದ ಶುಭಾಶಯಗಳು



ಪತ್ರಿಕೆಯ ಪುಟ

# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೧ ಜನೇವರಿ - ೨೦೦೯ ಬೆಲೆ : ೧೦ ರೂ/.

ಸಂಪಾದಕರು

**ವಿಶ್ವಾರಾಧ್ಯ ಸತ್ಯಂಪೇಟೆ**



ಪ್ರಕಾಶನ

ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ ಬಸವ ಮಾರ್ಗ ಸಿ.ಬಿ.ಕಾಲನಿ
ಶಹಾಪುರ - ೫೮೫ ೨೨೩ ಕಲಬುರ್ಗಿ ಜಿಲ್ಲೆ
ಸಂಚಾರ : 9480161315 e-mail : satyampet.2007@redifmail.com

## ಪತ್ರಿಕೆಗೆ ಒಂದು ವರ್ಷ !
## ನಮಗೆಲ್ಲ ಹರ್ಷವುಂಟಾಗಿದೆ

ಅಗ್ನಿ ಅಂಕುರ

KBJNL

ಒಂದ್ ಹೆಣ್ಣ ಬಿಡಬೇಕು ಅಷ್ಟೆ ! ?

ದೇವದುರ್ಗದಲ್ಲಿ ಚುನಾವಣಾ ಗುದಮುರಗಿ

ಆತ್ಮೀಯ ವಿಶ್ವಾರಾಧ್ಯ ಸತ್ಯಂಪೇಟೆ

ಮತ್ತೆ ಪತ್ರಿಕೆ ಪುನರಾರಂಭಿಸಿ ಒಂದು ವರ್ಷ ಆಗುತ್ತಿರುವ ಸಂಗತಿ ನಮಗೆಲ್ಲ ಹರ್ಷವನ್ನುಂಟು ಮಾಡಿದೆ. ಈ ಅವಧಿಯ ಉದ್ದಕ್ಕೂ ಪತ್ರಿಕೆ ಅತ್ಯಂತ ನಿರ್ಭೀಡೆಯಿಂದ ಯಾವ - ಯಾರ ಮುಲಾಜಿಗೆ ಒಳಗಾಗದೆ ವರದಿಗಳನ್ನು ಪ್ರಕಟಿಸಿದೆ. ಪ್ರತಿ ವರದಿಗಳ ಹಿಂದಿನ ಪತ್ರಿಕೆ ಸಾತ್ವಿಕವಾದ ಸಿಟ್ಟು ಸಮಯೋಚಿತವಾಗಿತ್ತು.

ಯಾವುದೆ ಕಾರಣಕ್ಕೂ ಪತ್ರಿಕೆ ಯಾವ ಜನ ನಾಯಕ ? ನೊಂದಿಗೂ ಸಖ್ಯ ಬೆಳೆಸಿಕೊಳ್ಳಬಾರದು. ಅವರೆಲ್ಲ ತೋರಿಸುವ ಮುಖ ಒಂದಾಗಿದ್ದರೆ ಒಳಗಿರುವ ಮುಖ ಇನ್ನೊಂದಾಗಿರುತ್ತದೆ. ಇದು ಪತ್ರಿಕೆಗೆ ಗೊತ್ತಿಲ್ಲದ್ದೇನಿಲ್ಲ.

ಪತ್ರಿಕೆ ನಮ್ಮದು ಎಂಬ ಕಳಕಳಿಯಿಂದ ಇಷ್ಟೆಲ್ಲ ಹೇಳಬೇಕಾಯಿತು. ಪತ್ರಿಕೆ ಕಳೆದ ವರ್ಷಕ್ಕಿಂತ ಮತ್ತೊಂದು ಹೆಜ್ಜೆ ಗಟ್ಟಿಯಾಗಿ ಇಡಲಿ.

ಗುಲಬರ್ಗಾ ೦ ಅಶೋಕ ಪಟವಾರಿ

## ನಿಮ್ಮ ಧೈರ್ಯ ಮೆಚ್ಚಬೇಕಾದುದೆ

ಪ್ರೀತಿಯ ಸಂಪಾದಕರೆ

ಲಿಂಗೈಕ್ಯ ವಿಶ್ವನಾಥರೆಡ್ಡಿ ಮುದ್ನಾಳರ ಕುರಿತು ಎಷ್ಟು ಚೆನ್ನಾಗಿ ಹಾಗೂ ಅತ್ಯಂತ ಸಮರ್ಥವಾಗಿ ಬರೆದಿದ್ದೀರಲ್ಲ ! ನಿಜಕ್ಕೂ ನಿಮ್ಮ ಧೈರ್ಯವನ್ನು ಮೆಚ್ಚಬೇಕಾದುದೆ. ಏಕೆಂದರೆ ಅವರ ಕುರಿತು ಸ್ಪಷ್ಟವಾಗಿ ಮಾತಾಡುವ ಜನಗಳೆ ಇಂದು ಕಮ್ಮಿ. ಆದರೆ ನೀವು ಹಾಗಾಗಲಿಲ್ಲ.

ಶಹಾಪುರ ೦ ಹೆಸರು ಬೇಡ

## ದರ್ಶನಾಪುರನೆ ಶಾಮೀಲಾಗಿದ್ದಾನೆ ?

ಪ್ರಿಯ ವಿಶ್ವಾರಾಧ್ಯ

ಕೆ.ಬಿ.ಜೆ.ಎನ್.ನಲ್ಲಿ ನಡೆಯುವ ಕರ್ಮಕಾಂಡಗಳ ಕುರಿತು ಸವಿವರವಾದ ವರದಿಯನ್ನು ಪತ್ರಿಕೆಯಲ್ಲಿ ನೋಡಿ ಅತ್ಯಂತ ಖುಷಿಯಾಯ್ತು. ಈ ವರದಿಯನ್ನು ನೋಡಿಯಾದರೂ ಸ್ಥಳೀಯ ಶಾಸಕ ದರ್ಶನಾಪುರ ಸಂಬಂಧಿಸಿದ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವಂತೆ ಸರಕಾರಕ್ಕೆ ಶಿಫಾರಸ್ಸು ಮಾಡಬೇಕು. ಆದರೆ ದರ್ಶನಾಪುರನೇ ಭ್ರಷ್ಟಾಚಾರಗಳಲ್ಲಿ ಶಾಮೀಲಾಗಿದ್ದಾನಲ್ಲ ? ೦ ಸ್ವಾಮಿ

### ನಮ್ಮ ಪತ್ರಿಕೆಯ ಕಾನೂನು ಸಲಹೆಗಾರರು

ಸರ್ವಶ್ರೀ ಗೋಪಾಲ ಎಸ್. , ಟಿ.ನಾಗೇಂದ್ರ ಸುರಪುರ , ರಮೇಶ ಸೇಡಂಕರ, ಹೊನ್ನಾರೆಡ್ಡಿ ಹಾಗೂ ವಿಶ್ವನಾಥ ಮುಂಡಾಸ, ಸಂತೋಷ ಸತ್ಯಂಪೇಟೆ,ಬಸ್ಸನಗೌಡ ದೇಸಾಯಿ ದೇವದುರ್ಗ, ಹೇಮರಡ್ಡಿ ಕೊಂಗಂಡಿ, ರವಿ ಅಳುಂಡಿ ದೇವದುರ್ಗ , ವೆಂಕಟರಡ್ಡಿ ಬೋನ್ಹಾಳ .......

# ಅಗ್ನಿಯ ಅಂತರಂಗ



















# ಕಾಂಗ್ರೇಸ್ ಹುಲ್ಲಿನಂತೆ ಬೆಳೆಯುತ್ತಿರುವ ಕನ್ನಡ ಸಂಘಗಳು



ಸುದರ್ಶನ

ಇಂದು ಕರ್ನಾಟಕದ ತುಂಬೆಲ್ಲ ಕನ್ನಡದ ರಕ್ಷಣೆಯ ಹೆಸರಿನ ಮೇಲೆ ದಿನ ಬೆಳಗಾಗುತ್ತಲೆ ನೂರಾರು ಕಡೆ ಕನ್ನಡ ಸೇನೆ, ಕರುನಾಡ ಸೇನೆ, ಕನ್ನಡ ರಕ್ಷಣಾ ವೇದಿಕೆ, ಕನ್ನಡ ಸಂಘ, ಕರ್ನಾಟಕ ಸೇನೆ ಎಂಬ ಹೆಸರಿನಿಂದ ಸಂಘಟನೆಗಳು ಅಸ್ತಿತ್ವಕ್ಕೆ ಬರುತ್ತಿವೆ.

ನಮ್ಮ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ತಮಿಳು ಜನಗಳು ಹಾಗೂ ಕೆಲವೊಂದು ಸಲ ತೆಲುಗು ಭಾಷಿಕರು ನಡೆಸುವ ಆಟಾಟೋಪ , ಮುಂತಾದವುಗಳನ್ನು ನೆನೆಯುತ್ತಿರುವಂತೆ ಎಂಥವರ ಮೈಯೂ ಕ್ಷಣ ಉರಿದು ಹೋಗುತ್ತದೆ. ತಮಿಳರಂತೂ ತಮ್ಮ ಭಾಷೆಯ ಮೇಲೆ ಎಷ್ಟೊಂದು ದುರ್ ವ್ಯಾಮೋಹಿತರಾಗಿರುವರೆಂದರೆ ಕನ್ನಡ ಭಾಷೆ ಅವರಿಗೆ ಬರುತ್ತಿದ್ದರೂ ಅದನ್ನು ಎಲ್ಲೂ ಬಳಸದೆ ತಮ್ಮ ಮೊಂಡುತನವನ್ನು ಪ್ರದರ್ಶಿಸುತ್ತಿರುತ್ತಾರೆ. ಅನ್ಯ ರಾಜ್ಯಗಳ ಮೊಂಡುತನಕ್ಕೆ ಮಣಿದೋ – ಉದಾರವಾದ ಗುಣಗಳಿಂದಲೋ ಕನ್ನಡಿಗರು ತಮ್ಮ ಸ್ವಾಭಿಮಾನವನ್ನು ಮರೆತು ಅವರಾಡುವ ಮಾತುಗಳನ್ನು ತಾವು ಕಲಿಯುವ ಮೂಲಕ ತಮ್ಮ ಕನ್ನಡ ಪ್ರೇಮವನ್ನು ಮರೆಯುತ್ತಿದ್ದಾರೆ. ಈ ಮೂಲಕ ತಾವು ಅಭಿಮಾನ ಶೂನ್ಯರು ಎಂದು ತೋರಿಸಿಕೊಳ್ಳುತ್ತಿದ್ದಾರೆ, ಆ ಮಾತು ಬೇರೆ.

ಇಂಥ ಸಂದರ್ಭದಲ್ಲಿ ಕರ್ನಾಟಕದಾದ್ಯಂತ ಕನ್ನಡ ಸಂಘಟನೆಗಳು ಹುಟ್ಟುತ್ತಿರುವುದು ಮೇಲು ನೋಟಕ್ಕೆ ಕೆಲವರಿಗೆ ಆಶಾದಾಯಕ ಬೆಳವಣಿಗೆಯಾಗಿ ಕಾಣಿಸಬಹುದು. ಆದರೆ ವಾಸ್ತವದಲ್ಲಿ ಈ ಸಂಘಟನೆಗಳ ಕರ್ನಾಟಕ ರಾಜ್ಯದ ಮುಖಂಡರು , ಹಾಗೂ ಅಲ್ಲಲ್ಲಿ ಸಂಘಟಿತಗೊಳ್ಳುತ್ತಿರುವ ಸದಸ್ಯರು ಹೇಗಿದ್ದಾರೆ? ಎಂದು ಪರಾಂಭರಿಸಿ ನೋಡಿದರೆ ಎಂಥವರ ಎದೆಯೂ ನಡುಗಿ ಹೋಗುತ್ತವೆ.

ಕರ್ನಾಟಕದ ಬಗೆಗೆ ಇವರಿಗೆ ಇರುವ ತಿಳುವಳಿಕೆಯಾದರು ಎಷ್ಟಿದೆ ? ಎಂದು ಅವಲೋಕಿಸಿದರೆ ನಿರಾಶೆ ಉಂಟಾಗುತ್ತದೆ. ಹಾಗಾದರೆ ಇವರೆಲ್ಲ ಏಕೆ ಸಂಘಟಿತರಾಗುತ್ತಿದ್ದಾರೆ ?! ಎಂದು ತಲಸ್ಪರ್ಶಿಯಾದ ಅಧ್ಯಯನಕ್ಕೆ ತೊಡಗಿದರೆ ನಿಬ್ಬೆರಗಾಗುವ , ನೋವಿನ ಸಂಗತಿಗಳು ನಮ್ಮೆಲ್ಲರ ಕಣ್ಣಮುಂದೆ ಬಿಚ್ಚಿಕೊಳ್ಳುತ್ತವೆ.

ಕನ್ನಡ ನಾಡಿನ – ನುಡಿಯ ಬಗೆಗೆ ಕರ್ನಾಟಕದಲ್ಲಿ ವಾಸಿಸುವ ಎಲ್ಲರಿಗೂ ಅಭಿಮಾನವಿರಲೆ ಬೇಕು. ಕನ್ನಡದ ಪರಂಪರೆಯ ಬಗೆಗೆ, ಇಲ್ಲಿನ ಸಂಸ್ಕೃತಿ , ನಾಗರಿಕತೆ, ವೈಶಿಷ್ಟ್ಯತೆಗಳ ಕುರಿತು ಯಾರಿಗಾದರೂ ಹೆಮ್ಮೆ ಇರಬೇಕಾದುದೆ. ಆದರೆ ಅದು ಬೇರೆ ಭಾಷೆಯ ಜನಗಳ ಬಗೆಗಿನ ತಿರಸ್ಕಾರವಾಗಕೂಡದು. ಇನ್ನೊಬ್ಬರ

## ನಿಮ್ಮೊಂದಿಗೆ

ಸಂಸ್ಕೃತಿಯನ್ನು ಪ್ರೀತಿಸುತ್ತಲೆ ನಮ್ಮ ಕನ್ನಡತನವನ್ನು ಬೆಳೆಸುವಂತಾಗಬೇಕು. ಕರ್ನಾಟಕದ ಕನ್ನಡ ಭಾಷೆಗೆ ತನ್ನದೆ ಆದ ಸ್ವತಂತ್ರ ಅಸ್ತಿತ್ವವಿದೆ. ಇತಿಹಾಸದ ಪರಂಪರೆಯೆ ಇದೆ. ಈ ಮೂಲಕ ಇದು ಭಾರತೀಯ ರಾಷ್ಟ್ರೀಯ ಭಾಷೆಗಳಲ್ಲಿ ಅನರ್ಘ್ಯ ರತ್ನವಾಗಿ ಹೊಳೆಯುತ್ತಿದೆ.

ಇಂಥ ಹೆಮ್ಮೆಯ ಇತಿಹಾಸವಿರುವ ಕನ್ನಡ ಭಾಷೆಯ ಹೆಸರಿನ ಮೇಲಿನ ಸಂಘಟನೆಯ ಮುಖಂಡರು ಇಂದು ಮಾಡುತ್ತಿರುವುದು ಏನನ್ನು ? ! ಕನ್ನಡದ ಹೆಸರಿನ ಮೇಲೆ ಏನು ಮಾಡಿದರೂ ನಡೆಯುತ್ತದೆ ಎಂಬ ಅಮಲಿನಲ್ಲಿರುವ ಯುವಕರು ತತ್ವ ಸಿದ್ಧಾಂತಗಳಿಲ್ಲದೆ ದಿಕ್ಕು ತಪ್ಪಿದ ನಾವೆಯಂತಾಗಿದ್ದಾರೆ. ತಮಗೆ ಏನು ತೋಚುತ್ತದೆ ಅದೆ ಕನ್ನಡದ ಕೆಲಸ ಎಂದು ತಪ್ಪು ಲೆಕ್ಕಾಚಾರದಲ್ಲಿದ್ದಾರೆ.

ಇನ್ನು ಕೆಲವು ಕಡೆ ಈ ಸಂಘಟನೆಗಳ ಮುಖಂಡರು ಕನ್ನಡದ ಹೆಸರಿನ ಮೇಲೆ ಬೇರೆ ಭಾಷಿಕ ಜನಗಳಂತಿರಲಿ , ಕನ್ನಡ ನಾಡಿನ ಜನತೆಯನ್ನು ಶೋಷಿಸುತ್ತಿದ್ದಾರೆ. ಹೆದರಿಸುತ್ತಿದ್ದಾರೆ ಇನ್ನೂ ಮುಂದೆ ಹೋಗಿ ಅವರನ್ನು ಸುಲಿಯುತ್ತಿದ್ದಾರೆ. ಕೆಲವು ಕಡೆಗಳಂಲ್ಲಂತೂ ರಾಜ್ಯ ಕೇಂದ್ರ ಸರಕಾರದ ಕಚೇರಿಯ ಮುಂದೆ ಬಿಕ್ಷುಕರಂತೆ ನಿಂತು, ಅಲ್ಲಿನ ಅಧಿಕಾರಿಗಳನ್ನು ಹೆದರಿಸಿ ಅವರ ಲೂಟಿಯಲ್ಲಿ ತಮ್ಮದೂ ಒಂದು ಪಾಲುಕೊಡಬೇಕು ಎಂದು ಕೇಳುತ್ತಿದ್ದಾರೆ. ತಮಗೆ ತಿಂಗಳಿಗೆ ಇಂತಿಷ್ಟು ರೋಲ್ ಕಾಲ್ ಕೊಡದೆ ಹೋದರೆ ನಿಮ್ಮ ವಿರುದ್ಧ ಪತ್ರಿಭಟನೆ ಮಾಡುತ್ತೇವೆ ಎಂಬ ಧಮಕಿಯನ್ನು ಹಾಕುತ್ತಿದ್ದಾರೆ. ಸ್ಥಳೀಯ ಪೋಲಿಸ್ ಅಧಿಕಾರಿಗಳು ತಮಗೆ ಗೊತ್ತಿರುವರೆಂಬ ಒಂದೆ ಒಂದು ಕಾರಣಕ್ಕೆ ವಿನಾಕಾರಣ ದರ್ಪದಿಂದ ಮೆರೆಯುತ್ತಿದ್ದಾರೆ. ಇದನ್ನು ಗಮನಿಸಿದ , ಯಾವುದೆ ತಿಳುವಳಿಕೆ ಇಲ್ಲದೆ ಪಡ್ಡೆ ಹುಡುಗರು ಈ ಸಂಘಟನೆಗಳತ್ತ ತೀವ್ರವಾಗಿ ವ್ಯಾಮೋಹಿತರಾಗುತ್ತಿದ್ದಾರೆ.

ಪ್ರತಿ ದಿನ ಹೇಗಾದರೂ ಸೈ ಪತ್ರಿಕೆಗಳಲ್ಲಿ ಮಿಂಚಬೇಕು ; ಈ ಮೂಲಕ ನಾಡಿನ ನಾಯಕನಾಗಿ ಬೆಳೆಯಬೇಕು ಎಂಬ ಹುಚ್ಚು ತಿಳುವಳಿಕೆಯಲ್ಲಿರುವ ಹುಡುಗರು ಸುಖಾಸುಮ್ಮನೆ ನಾಲ್ಕಾರು ಜನಗಳನ್ನು ತರುಬಿ ನಿಲ್ಲಿಸಿ ಫೋಟೋ ಕ್ಲಿಕ್ಕಿಸಿಕೊಂಡು ಪತ್ರಿಕೆಗಳಿಗೆ ಕಳಿಸುತ್ತಿರುವ ಸಾಕಷ್ಟು ಉದಾಹರಣೆಗಳು ನಮ್ಮ ಕಣ್ಣ ಮುಂದೆ ಇವೆ.

ದಿನ ನಿತ್ಯ ಪತ್ರಿಕೆಗಳಲ್ಲಿ ಈ ನಾಯಕರುಗಳ, ಕಾರ್ಯಕರ್ತರುಗಳ ಫೋಟೋ ಪ್ರಕಟವಾದ ಮಾತ್ರಕ್ಕೆ ದೊಡ್ಡ ಕೊಂಬೇನು ಮೂಡುವುದಿಲ್ಲ. ಬದಲಾಗಿ ಮತ್ತಷ್ಟು ಇನ್ನಷ್ಟು ಜವಾಬ್ದಾರಿಯಿಂದ ಹೆಜ್ಜೆಗಳನ್ನು ಇಡಬೇಕಾಗುತ್ತದೆ. ಸಂಘಟನೆಯನ್ನು ಮತ್ತಷ್ಟು ಪ್ರಬಲವಾಗಿ ಕಟ್ಟಬೇಕಾಗುತ್ತದೆ.

ಆದರೆ ಈ ಸಂಘಟನೆಗಳ ರಾಜ್ಯದ ಮುಖಂಡರುಗಳೆ ಬಹುತೇಕ ರೋಲ್ ಕಾಲ್ ದಂಧೆಗೆ ಇಳಿದಿರುವಾಗ, ಕನ್ನಡ ನಾಡಿನ ಬಗೆಗೆ ಸರಿಯಾದ ತಿಳುವಳಿಕೆ ಇಲ್ಲದೆ ಇರುವಾಗ ತಮ್ಮ ಕೆಳಗಿನ ಹಂತದ ಸಂಘಟನೆಯ ನಾಯಕರಿಗೆ ಹೇಗೆ ಮಾದರಿಯಾಗಲು ಸಾಧ್ಯ ? ಆದ್ದರಿಂದಲೆ ಅವರವರ ಏರಿಯಾಗಳಲ್ಲಿ ಕನ್ನಡದ ಹೆಸರಿನ ಮೇಲೆ ಸುಲಿಯುವ ಭರಾಟೆ ಈಗ ಶುರುವಾಗಿದೆ. ಯಾವುದೆ ಸಂಘಟನೆಗೆ ಗುರಿ ಹಾಗೂ ಸಿದ್ಧಾಂತವೆ ಇಲ್ಲದೆ ಎಂಥ ದೊಡ್ಡ ಸಂಘಟನೆಯಾದರೂ ಅದು ತಾಳತಪ್ಪುತ್ತದೆ. ರೋಲ್ ಕಾಲ್ ದಂಧೆಗೆ ಇಳಿಯುತ್ತದೆ.

ಕಾಂಗ್ರೇಸ್ ಹುಲ್ಲಿನೋಪಾದಿಯಲ್ಲಿ ಪಾಪಸು ಕಳ್ಳಿಯಂತೆ ಕನ್ನಡದ ನೆಲದ ತುಂಬ ಹರಡುತ್ತಿರುವ ಈ ಅರ್ಬುದ ಹೀಗೆ ನಿರ್ಲಕ್ಷಿಸಿದ್ದೆ ಆದರೆ ಕನ್ನಡಿಗರಿಗೆ ಅದು ಕುತ್ತಾಗಲಿದೆ , ಅಲ್ಲವೆ ?

೦ ವಿಶ್ವಾರಾಧ್ಯ ಸತ್ಯಂಪೇಟೆ

# ಸಿಂಧನೂರು : ಅಡ್ಡಪಲ್ಲಕ್ಕಿ ಅಯ್ಯಯ್ಯಪ್ಪಗಳ ಕಿತಾಪತಿ



ರಾಯಚೂರು ಜಿಲ್ಲೆಯ ಸಿಂಧನೂರು ತುಂಬೆಲ್ಲ ತಿಂಗಳೊಪ್ಪತ್ತಿನಿಂದಲೂ ಪಂಚಾಚಾರ್ಯ ಕೃಪಾಪೋಷಿತ ಮಂಡಳಿ ಕೇದರಿ ಕೇರು ಹಾಕಿಕೊಳ್ಳುವ ಕಾರ್ಯಕ್ರಮ ಹಾಕಿಕೊಂಡಂತೆ ಕಾಣುತ್ತಿದೆ. ಇವರಿಗೆಲ್ಲ ಸಾಥ್ ನೀಡಲು ಸ್ಥಳೀಯ ರಂಭಾಪುರಿ ಶಾಖಾಮಠದ ಸೋಮನಾಥ ಶಿವಾಚಾರ್ಯಸ್ವಾಮಿ , ನಗರ ಸಭೆಯ ಅಧ್ಯಕ್ಷ ಶರಣಪ್ಪ ಟೆಂಗಿನಕಾಯಿ , ಜಂಗಮ ಸಮಾಜದ ಅಧ್ಯಕ್ಷ ಸಂಗಯ್ಯಸ್ವಾಮಿ,ಕ್ಯಾ(ಖ್ಯಾ)ತ ಸಂಶೋಧಕ ಶಾಶತಿಸ್ವಾತಿ ಮುಕುಂದಿಮಠ,ಹಂಪಯ್ಯಸ್ವಾಮಿ ರ್‍ಯಾವಿಹಾಳ ಮುಂತಾದವರೆಲ್ಲ ಇಟ್ಟೆಯ ಹಣ್ಣು ತಿಂದ ನರಿ ಸೃಷ್ಟಿಯೇ ತಿರುಗಿತು ಎಂಬಂತೆ ಅರಚಾಡುತ್ತಿದ್ದಾರೆ. ಒಟ್ಟಿನಲ್ಲಿ ಸಿಂಧನೂರ ತುಂಬೆಲ್ಲ "ಪಂಚಾಚಾರ್ಯರ ಪಲ್ಲಕ್ಕಿ ಯಾಕೆ ಹೊರಬಾರದು ? ಹೊತ್ತರೆ ತಪ್ಪೇನು ? " ಎಂಬ ಬಗ್ಗೆ ತೀವ್ರ ಜಿಜ್ಞಾಸೆಗೆ ತೊಡಗುವುದಕ್ಕಿಂತ ಕೀಳು ಮಟ್ಟದ ಕೆಸರೆರಚಾಟ ಶುರುವಾಗಿದೆ. ಇದು ಇಷ್ಟಕ್ಕೆ ನಿಲ್ಲುವ ಲಕ್ಷಣಗಳೂ ಕಾಣುತ್ತಿಲ್ಲ.

ಗುಲಬರ್ಗಾ ಜಿಲ್ಲೆಯ ಶಹಾಪುರದಿಂದ ಪ್ರಕಾಶಿತವಾಗುವ ಲಿಂಗಣ್ಣ ಸತ್ಯಂಪೇಟೆಯವರ ಸಂಪಾದಕತ್ವದಲ್ಲಿ ಪ್ರಕಟವಾಗುವ 'ಬಸವ ಮಾರ್ಗ' ಪತ್ರಿಕೆಯ ನವೆಂಬರ್ ಸಂಚಿಕೆಯಲ್ಲಿ "ಅಡ್ಡದಾರಿಯ ಅಡ್ಡಪಲ್ಲಕ್ಕಿ" ಎಂಬ ಲೇಖನ ಪ್ರಕಟವಾಗಿರುವುದೆ ಇಷ್ಟೆಲ್ಲ ಅವಾಂತರಗಳಿಗೆ ಕಾರಣವಾಗಿದೆ. ಹಾಗಾದರೆ ಆ ಲೇಖನದಲ್ಲಿರುವ( ಬಾಕ್ಸ್ ನಲ್ಲಿ ಅಡ್ಡದಾರಿಯ ಅಡ್ಡಪಲ್ಲಕ್ಕಿ ಕಿರು ಲೇಖನ ಪ್ರಕಟಿಸಲಾಗಿದೆ ) ಅಂಶಗಳಾದರೂ ಏನು ? ಎಂದು ಪರಾಂಭರಿಸಿ ನೋಡಿದರೆ ಇದರಲ್ಲೇನು ಅಂಥ ವಿಶೇಷ ಇಲ್ಲವಲ್ಲ ! ಎಂದು ಯಾರಿಗಾದರೂ ಅನಿಸಿಬಿಡುತ್ತದೆ.

ಆದರೆ 'ಒತ್ತಿದರೆ ಸರಿಯಣ್ಣ ಸರಿದರೆ ಒತ್ತಣ್ಣ' ಜಾತಿಗೆ ಸೇರಿದ "ಪಂಚಾಚಾರ್ಯರು ಹಾಗೂ ಅವರ ಕೃಪಾ ಪೋಷಿತ ಮಂಡಳಿ" ಮಾತ್ರ ಆಗಾಗ ಅಂಜಿದವರ ಮೇಲೆ ಹಾವಿನ ಹಗ್ಗ ಎಸೆದು ಖುಷಿಪಟ್ಟರು ಎಂಬಂತೆ ಮಾಡುತ್ತಿರುತ್ತಾರೆ. ಬಸವಕೇಂದ್ರದ ಕಾರ್ಯದರ್ಶಿ ಶಿವಣ್ಣ ಹ.ಸಣ್ಣೆಪ್ಪನವರ್ ಹೆಸರಿನಲ್ಲಿ "ಬಸವಮಾರ್ಗ ಪತ್ರಿಕೆ"ಯ ನವೆಂಬರ್ ೨೦೦೮ ರ ಸಂಚಿಕೆಯಲ್ಲಿ ಅಡ್ಡದಾರಿಯ ಅಡ್ಡಪಲ್ಲಕ್ಕಿ ಎಂಬ ಕಿರು ಬರಹವೊಂದು ಪ್ರಕಟವಾಗಿದೆ. ವಾಸ್ತವಾಗಿ ಈ ಬರಹವನ್ನು ಬರೆದವರು ಕಲಬುರ್ಗಿಯ ಸಿದ್ರಾಮಪ್ಪ ಬಾಲಪ್ಪಗೋಳ್ ಅವರು ಬರೆದಿದ್ದಾರೆ. ಅದು ಅಚಾತುರ್ಯದಿಂದ ಶಿವಣ್ಣ ಸಣ್ಣೆಪ್ಪನವರ ಹೆಸರು ಪ್ರಕಟವಾಗಿದೆ ಎಂದು ಪತ್ರಿಕೆಯ ಸಂಪಾದಕರಾದ ಲಿಂಗಣ್ಣ ಸತ್ಯಂಪೇಟೆಯವರು ಈಗಾಗಲೆ ಪತ್ರಿಕೆಯ ಪ್ರಕಟಣೆಯ ಮೂಲಕ ತಿಳಿಸಿದ್ದಾರೆ. ಆದಾಗ್ಯೂ ಶಿವಣ್ಣ ಸಣ್ಣೆಪ್ಪನವರ ಮೇಲೆ ಹಗೆ ಸಾಧಿಸಲೇಬೇಕೆಂದು ಹೊರಟಿರುವ ಪಂಚಾಚಾರ್ಯವಾದಿಗಳು ಅವರು ಸರಕಾರಿ ನೌಕರರಾಗಿರುವುದರಿಂದ ಅವರನ್ನು ನೌಕರಿಯಿಂದ ವಜಾ ಮಾಡಿಸಬೇಕೆಂದು ಇಲ್ಲದ ರಾದ್ಧಾಂತ ಮೆರೆಯುತ್ತಿದ್ದಾರೆ.


ಲಿಂಗಣ್ಣ ಸತ್ಯಂಪೇಟೆ

ಇಷ್ಟಕ್ಕೆಲ್ಲ ಮೂಲ ಕಾರಣವೇನೆಂದು ಹುಡುಕಹೊರಟರೆ ಪಂಚಾಚಾರ್ಯವಾದಿಗಳ ಕೀಳುತನ ಎದ್ದು ಕಾಣುತ್ತದೆ. ಬಸವಾದಿ ಶರಣರ ಸರಳ– ಸುಲಭ ಹಾಗೂ ಸುಲಲಿತವಾದ ವಚನಗಳನ್ನು ಸರಿಯಾಗಿ ಓದಿಕೊಂಡಿರುವ ಸಣ್ಣಪ್ಪನವರ್ ಅದನ್ನು ಜನಸಾಮಾನ್ಯನಿಗೆ ತಿಳಿಸಬೇಕೆಂದು ಆಹೋ ರಾತ್ರಿ ಶ್ರಮಿಸುತ್ತ ಬಂದಿದ್ದಾರೆ. ಬಸವಕೇಂದ್ರದ ಮೂಲಕ ಇಡೀ ಸಿಂಧನೂರಿನ ಹಳ್ಳಿ ಪಟ್ಟಣಗಳ ತುಂಬೆಲ್ಲ 'ಮನೆಯಲ್ಲಿ ಮಹಾಮನೆ'ಎಂಬ ಕಾರ್ಯಕ್ರಮದ ಮೂಲಕ ತತ್ವಗಳನ್ನು ಪ್ರಚುರ ಪಡಿಸುತ್ತ( ತಮ್ಮ ಕಚೇರಿಯ ಬಿಡುವಿನ ವೇಳೆಯಲ್ಲಿ ) ಬರುತ್ತಿದ್ದಾರೆ. ಬಸವಾದಿ ಶರಣರ ವಿಚಾರಗಳಿಂದ ಆಕರ್ಷಿತರಾದ ಜನತೆ ಸಹಜವಾಗಿಯೆ ತಾವು ಈ ಹಿಂದೆ ನಂಬಿಕೊಂಡು ಬಂದಿದ್ದ ಪಂಚಾಚಾರ್ಯರ ಪಲ್ಲಕ್ಕಿ ಪೊರತು ತತ್ವವನ್ನು ವಿರೋಧಿಸುತ್ತಿದ್ದಾರೆ. ಬಹಳಷ್ಟು ವರ್ಷಗಳಿಂದ ಅನುಚಾನವಾಗಿ ನಡೆಸಿಕೊಂಡು ಬರುತ್ತದ್ದ ಕಂದಾಚಾರ– ಮೂಢನಂಬಿಕೆಗಳನ್ನು ಬಿಟ್ಟು ವಾಸ್ತವವಾಗಿ ಆಲೋಚಿಸುವ ಸರಿ ಯಾವುದು ? ತಪ್ಪು ಯಾವುದು ? ಎಂದು ವಿವೇಚನೆಯ ಮೂಲಕ ತಿಳಿಯುತ್ತಲೇ ಅಯ್ಯಗಳ ಬ್ರಾಹ್ಮಣಿಕೆಯನ್ನು ಟೀಕಿಸುವ ಮಟ್ಟದಲ್ಲಿ ಅವರೆಲ್ಲ ಪ್ರಜ್ಞಾವಂತರಾಗುತ್ತಿದ್ದಾರೆ. ಇದು ಅಡ್ಡಪಲ್ಲಕ್ಕಿ ಅಯ್ಯಪ್ಪಗಳಿಗೆ ಹೇಗೋ ಜಾತಿಜಂಗಮರಿಗೆ ಕೂಡ ನುಂಗಲಾಗದ ತುತ್ತಾಗಿದೆ. ಕಾಲ ಕ್ರಮೇಣ ತಮ್ಮ ಮಹತ್ವ ಲಿಂಗಾಯತ ಸಮಾಜದಲ್ಲಿ ಇಲ್ಲವಾಗಿ ನಾವೆಲ್ಲಿ ಮೂಲೆಗುಂಪಾಗಿ ಬಿಡುತ್ತೇವೋ ?! ಎಂಬ ಅಳುಕು ಉಂಟಾಗಿದೆ. ಇದರಿಂದಾಗಿ ಕಾಲು ಕೆದರಿ ಜಗಳ ತೆಗೆದು ಶಿವಣ್ಣ ಸಣ್ಣಪ್ಪನವರ ಬಾಯಿಮುಚ್ಚಿಸಿದರಾಯಿತು ಎಂದು ಜಂಗಮದ್ವಯರೆಲ್ಲ ನಿರ್ಧರಿಸಿದ್ದಾರೆ.

ಇದಕ್ಕೆ ಪೂರವಾದ ವಾತಾವರಣವೆಂಬಂತೆ ಸಿಂಧನೂರಿನ ಬಸವಕೇಂದ್ರವೂ ಇತ್ತೀಚೆಗೆ ಒಡೆದ ಮನೆಯಾಗಿದೆ. ವೀರರಾಣಿ ಕಿತ್ತೂರ ಚೆನ್ನಮ್ಮಯ ಜೊತೆಯಿದ್ದು ಅವಳನ್ನೆ ನುಂಗಿನೋಡಿದ ಮೀರಸಾದಕರಂತೆ ಈ ಬಸವಕೇಂದ್ರದಲ್ಲಿದ್ದೂ ಬಸವಾದಿ ಶರಣರ ತತ್ವಗಳಿಗೆ ಅಪಚಾರ ಎಸಗುವ ದ್ರೋಹಿಗಳನ್ನು ಗುರುತಿಸಿದ ಬಸವಕೇಂದ್ರದ ಬಳಗ ಅವರನ್ನು ದೂರವಿಟ್ಟು ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಇದು ಅವರಿಗೆಲ್ಲ ನುಂಗಲಾಗದ ತುತ್ತಾಗಿದೆ. ಅತ್ತ ಪಂಚಾಚಾರ್ಯರ ಅಯ್ಯಚಾರ, ಪೂಜೆ, ಮನಸ್ಕಾರಗಳನ್ನು ಸ್ವೀಕರಿಸುತ್ತ , ಸಾಕಷ್ಟು ಮೌಢ್ಯದ ನಂಬಿಕೆಗಳನ್ನು ಮತ್ತೆ ಜನಸಾಮಾನ್ಯರಲ್ಲಿ ಬಿತ್ತುತ್ತ – ಇತ್ತ ಬಸವಣ್ಣನವರ ಹೆಸರು ಹೇಳಿ ಬಸವಕೇಂದ್ರದ ಜನಗಳನ್ನು ಸಂಪ್ರೀತಗೊಳಿಸುತ್ತ ನಡೆದಿದ್ದ ಸ್ವಾಮಿ–ಮಹಾಸ್ವಾಮಿಗಳು ಇದೆಲ್ಲದರಿಂದ ವ್ಯಗ್ರರಾಗಿದ್ದಾರೆ.



"ಒಲ್ಲದ ಹೆಂಡತಿ ನೀಡಿದ ಮೊಸರಿನಲ್ಲೂ ಕಲ್ಲು" ಎಂಬಂತೆ ಬಸವ ಮಾರ್ಗ ಪತ್ರಿಕೆಯಲ್ಲಿ ಬಂದಿರುವ ಸಣ್ಣ

## ಗಾರ್ಧಭ ಗಾಥಾ

**'ಒತ್ತಿದರೆ ಸರಿಯಣ್ಣ ಸರಿದರೆ ಒತ್ತಣ್ಣ' ಜಾತಿಗೆ ಸೇರಿದ "ಪಂಚಾಚಾರ್ಯರು ಹಾಗೂ ಅವರ ಕೃಪಾ ಪೋಷಿತ ಮಂಡಳಿ" ಮಾತ್ರ ಆಗಾಗ ಅಂಜಿದವರ ಮೇಲೆ ಹಾವಿನ ಹಗ್ಗ ಎಸೆದು ಖುಷಿಪಟ್ಟರು ಎಂಬಂತೆ ಮಾಡುತ್ತಿರುತ್ತಾರೆ. ಬಸವಕೇಂದ್ರದ ಕಾರ್ಯದರ್ಶಿ ಶಿವಣ್ಣ ಹ.ಸಣ್ಣಪ್ಪನವರ್ ಹೆಸರಿನಲ್ಲಿ "ಬಸವಮಾರ್ಗ ಪತ್ರಿಕೆ"ಯ ನವೆಂಬರ್ ೨೦೦೮ ರ ಸಂಚಿಕೆಯಲ್ಲಿ ಅಡ್ಡಪಾರಿಯ ಅಡ್ಡಪಲ್ಲಕ್ಕಿ ಎಂಬ ಕಿರು ಬರಹವೊಂದು ಪ್ರಕಟವಾಗಿದೆ. ವಾಸ್ತವಾಗಿ ಈ ಬರಹವನ್ನು ಬರೆದವರು ಕಲಬುರ್ಗಿಯ ಸಿದ್ರಾಮಪ್ಪ ಬಾಲಪ್ಪಗೋಳ್ ಅವರು ಬರೆದಿದ್ದಾರೆ. ಅದು ಅಚಾತುರ್ಯದಿಂದ ಶಿವಣ್ಣ ಸಣ್ಣಪ್ಪನವರ ಹೆಸರು ಪ್ರಕಟವಾಗಿದೆ ಎಂದು ಪತ್ರಿಕೆಯ ಸಂಪಾದಕರಾದ ಲಿಂಗಣ್ಣ ಸತ್ಯಂಪೇಟೆಯವರು ಈಗಾಗಲೆ ಪತ್ರಿಕೆಯ ಪ್ರಕಟಣೆಯ ಮೂಲಕ ತಿಳಿಸಿದ್ದಾರೆ. ಆದಾಗ್ಯೂ ಶಿವಣ್ಣ ಸಣ್ಣಪ್ಪನವರ ಮೇಲೆ ಹಗೆ ಸಾಧಿಸಲೇಬೇಕೆಂದು ಹೊರಟಿರುವ ಪಂಚಾಚಾರ್ಯವಾದಿಗಳು ಅವರು ಸರಕಾರಿ ನೌಕರರಾಗಿರುವುದರಿಂದ ಅವರನ್ನು ನೌಕರಿಯಿಂದ ವಜಾ ಮಾಡಿಸಬೇಕೆಂದು ಇಲ್ಲದ ರಾದ್ಧಾಂತ ಮೆರೇಯುತ್ತಿದ್ದಾರೆ.**



ಲೇಖನವೊಂದರ ಮೂಲ ಹಿಡಿದು, ಶಿವಣ್ಣ ಸಣ್ಣಪ್ಪನವರನ್ನು ಹಣಿಯಲು ಹೊರಟಿದ್ದು ನಿಜಕ್ಕೂ ನಾಚಿಕೆಗೇಡಿನ ಸಂಗತಿಯಾಗಿದೆ. ಸತ್ಯ ಪ್ರತಿಪಾದನೆ ಮಾಡುವವರು ಯಾರು ಎಂದು ವಿವೇಚಿಸುವುದಕ್ಕಿಂತ ಅವರು ಹೇಳಿದ ಮಾತುಗಳಲ್ಲಿ ಸತ್ಯವಿದೆಯೋ ? ಇಲ್ಲವೋ ? ಎಂದು ವಿವೇಚಿಸುವ ಗೊಡವೆಗೆ ಹೋಗದ ಸಿಂಧನೂರಿನ ವೀರಶೈವ ಮುಖಂಡರಾದ ಎನ್.ಶಿವನಾಗಪ್ಪ ,ಶರಣಪ್ಪ ಟೆಂಗಿನಕಾಯಿ, ಅಮರೇಶ್ ಕುಂಬಾರ, ಎಸ್. ಶರಣೆಗೌಡ ಮುಂತಾದವರು ತಾವು ಹಿಡಿದ ಮೊಲಕ್ಕೆ ಮೂರೆ ಕಾಲುಗಳು ಎಂಬ ವಿತಂಡವಾದಕ್ಕೆ ತೊಡಗಿದ್ದಾರೆ. ಸರಕಾರಿ ಶಾಲಾ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ ಶಿವಣ್ಣ ಹ.ಸಣ್ಣಪ್ಪನವರನ್ನು ಕೆಲಸದಿಂದ ವಜಾ ಮಾಡಿ ಕ್ರಮಕೈಗೊಳ್ಳಬೇಕು ಎಂತಲೂ ತೀವ್ರ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಇಂಥ ಕೀಳು ಹುನ್ನಾರದ ಚಟುವಟಿಕೆ ನಿಜಕ್ಕೂ ನಾಚಿಕೆಗೆಡಿನದು.ವೀರಶೈವ ಸಮಾಜದ ಪಂಚಪೀಠಾಧೀಶ್ವರರನ್ನು ಭಕ್ತವರ್ಗಕ್ಕೆ ಸೇರಿದ ನಾವುಗಳೆಲ್ಲ ಭುಜದ ಮೇಲಾದರೂ ಹೊತ್ತುಕೊಂಡು ಸಂಭ್ರಮಿಸುತ್ತೇವೆ. ಇನ್ನಾವ ಕಡೆಯಾದರೂ ಹೊತ್ತುಕೊಂಡು ಖುಷಿಪಡುತ್ತೇವೆ. ಇದನ್ನೆಲ್ಲ ಕೇಳುವವರು ನೀವ್ಯಾರು ? ಎಂಬ ಧಾಟಿಯಲ್ಲಿ ಮಾತಾಡುತ್ತ ಹೊರಟರೆ ಏನೆನ್ನಬೇಕು ? ಕಾಲವು ತೀವ್ರಗತಿಯಲ್ಲಿ ಬದಲಾಗುತ್ತ ಹೊರಟಿದ್ದರೂ ತಾವು ಮಾತ್ರ ಅದೇ ಓಬಿರಾಯನ ಕಾಲದಲ್ಲಿಯೆ ಇದ್ದು ಪಲ್ಲಕ್ಕಿಯನ್ನು ಹೊತ್ತುಕೊಂಡೆ ಇರುತ್ತೇವೆ ಎಂದು ಹೇಳುವ ಈ ವೀರಶೈವ ಜನಗಳ ಮನೋಭಾವನಕ್ಕೆ ಮರುಕಪಡಬೇಕಾಗುತ್ತದೆ ಅಷ್ಟೆ. ೦ **ಮಿಂಡಜಂಗಮ**



**ಮುಂದಿನ ಪುಟದಲ್ಲಿ ಸಿಂಧನೂರಿನಲ್ಲಿ ಅಯ್ಯಪ್ಪಗಳ ರಾದ್ಧಾಂತಕ್ಕೆ ಕಾರಣವಾದ ಬಸವ ಮಾರ್ಗದ ಲೇಖನ**

ಗಾರ್ದಭ ಗಾಥಾ

# ಅಡ್ಡದಾರಿಯ ಅಡ್ಡ ಪಲ್ಲಕ್ಕಿ

ಕಾಲವು ತೀವ್ರ ಗತಿಯಲ್ಲಿ ಬದಲಾಗುತ್ತಿದೆ. ನಮ್ಮ ಪಂಚಾಚಾರ್ಯ ಪ್ರಭುತಿಗಳು ಮಾತ್ರ ಕಿಂಚಿತ್ತೂ ಬದಲಾಗುತ್ತಿಲ್ಲ. ರಾಜ ಮಹಾರಾಜರುಗಳ ಕಾಲ ಮರೆಯಾಗಿದೆ. ಅವರೆಲ್ಲ ಈಗ ಪೋತರಾಜರುಗಳಾಗಿ ಬಿಟ್ಟಿದ್ದಾರೆ. ಆದರೆ ಈ ಪೀಠಾಧೀಶ್ವರರು ತಾವಿನ್ನು ಅದೇ ಕಾಲದಲ್ಲಿ ಇದ್ದವರಂತೆ ವರ್ತಿಸುತ್ತಿದ್ದಾರೆ.

ರಾಜ ಮಹಾರಾಜರುಗಳ ಕಾಲದಲ್ಲಿ ಯಾವುದೇ ವಾಹನ ಸೌಕರ್ಯ ಇರಲಿಲ್ಲ. ಆಗ ಇದ್ದ ಏಕಮೇವ ವಾಹನವೆಂದರೆ ಕುದುರೆ ಮಾತ್ರ. ಅವನ್ನು ಬಿಟ್ಟರೆ ಆನೆಗಳು ! ರಾಜರ ಯಾವುದಾದರೊಂದು ದಿಗ್ವಿಜಯ ಸಾಧಿಸಿಕೊಂಡು ಬಂದರೆಂದರೆ ಆಗ ಮಾತ್ರ ಅವರು ತಮಗೆ ತಾವೇ ಆನೆಯ ಮೇಲೆ ಅಂಬಾರಿ ಕಟ್ಟಿಕೊಂಡು ಮೆರವಣಿಗೆ ಹೊರಡುತ್ತಿದ್ದರು. ಇಲ್ಲವಾದಲ್ಲಿ ಮೇನೆಗಳಲ್ಲಿ ಪಲ್ಲಕ್ಕಿಯಲ್ಲಿ ಮೆರೆದಾಡುತ್ತಿದ್ದರು. ಅದು ಅವರದೇ ಕಾಲಮಾನವಾಗಿತ್ತಾದ್ದರಿಂದ ಅವರು ಹೇಳಿದಂತೆ ಕೇಳಿಕೊಂಡು ಬದುಕೋದು ಜನರಿಗೆ ಅನಿವಾರ್ಯವಾಗಿತ್ತು.

ಆದರೆ ಈಗ ಪ್ರಜಾಪ್ರಭುತ್ವ ಬಂದಿದೆ. ಸಾಲದ್ದಕ್ಕೆ ವಾಹನ ಸೌಲಭ್ಯಗಳೂ ವಿಫೂಲವಾಗಿ ಬಂದಿವೆ. ಇಂಥ ದಿನಮಾನಗಳಲ್ಲಿ ಅಡ್ಡಪಲ್ಲಕ್ಕಿಯಲ್ಲಿ ಕುಳಿತು ಮೆರೆಯ ಬಯಸುವುದು ಎಂಥ ಹಾಸ್ಯಾಸ್ಪದ ಸಂಗತಿ ಎಂಬುದನ್ನು ಅವರು ಅರಿಯದೇ ಹೋಗಿರುವುದು ನಿಜಕ್ಕೂ ಮರುಕಪಡಬೇಕಾದ ವಿಷಯವಾಗಿದೆ.

ಅವರು ಯಾಕೆ ಮೆರೆಯಬೇಕೆನ್ನುತ್ತಾರೋ ಯಾರಿಗೂ ತಿಳಿಯದು ! ಸಾಮಾನ್ಯವಾಗಿ ಇಂದು ಕುಸ್ತಿ ಆಡಿ ಗೆದ್ದು ಬಂದವರನ್ನು ಯಾವುದೋ ಆಟದಲ್ಲಿ ಯಶಸ್ಸು ಸಂಪಾದಿಸುವುದನ್ನು ಇಲ್ಲವೇ , ಚುನಾವಣೆಗಳಲ್ಲಿ ಗೆದ್ದು ಬಂದವರನ್ನು ಮೆರೆಸುತ್ತಿರೋದು ವಾಡಿಕೆಯಾಗಿದೆ. ಹಾಗಂತ ಅವರನ್ನು ಸಹ ಯಾರೂ ತಮ್ಮ ಹೆಗಲ ಮೇಲೆ ಹೊತ್ತುಕೊಂಡು ಮೆರೆಸುವುದಿಲ್ಲ. ಬಹಳವಾದರೆ ಜೀಪುಗಳಲ್ಲಿ ಕುಳ್ಳಿರಿಸಿ ಮೆರವಣಿಗೆ ಹೊರಡಿಸುತ್ತಾರೆ , ಅದು ಕೂಡ ಅವರ ಸೀಮಿತ ಕ್ಷೇತ್ರದಲ್ಲಿ ಮೆರೆಸುತ್ತಾರಲ್ಲದೆ ಎಲ್ಲಾ ಕಡೆಗಳಲ್ಲೂ ಅಲ್ಲ.

ಆದರೆ ಈ ಜಗದ್ಗುರುಗಳ ಮೆರವಣಿಗೆ ಸೀಮಾರೇಖೆ ಎಂಬುದಿಲ್ಲ. ಏಕೆಂದರೆ ಇವರು ಜಗದ್ಗುರುಗಳು ತಾನೆ ? ಮೆರೆದರೆ ಮರೆಯಲಿ, ಯಾವುದಾದರೊಂದು ವಾಹನದಲ್ಲಿ ಕುಳಿತು ಮೆರೆಯಲಿ – ಯಾರು ಬೇಡವೆನ್ನುತ್ತಾರೆ ? ಜೀಪು– ಲಾರಿಗಳು ಸಾಲವಾದರೆ ದೊಡ್ಡ ಟ್ರ್ಯಾಕ್ಟರ್‌ಗಳಲ್ಲಿ, ಜೇಸಿಬಿ ಟ್ರ್ಯಾಲಿಗಳಲ್ಲಿ ಕುಳಿತು ಮೆರೆಯಲಿ, ನೋಡೋರು ನೋಡುತ್ತಾರೆ. ಬಿಡೋರು ಬಿಡುತ್ತಾರೆ. ಹೆಜ್ಜೆ ಹೆಜ್ಜೆಗೆ ಮಾನವ ಧರ್ಮಕ್ಕೆ ಜಯವಾಗಲಿ ಎಂದು ಘೋಷಣೆ ಕೂಗುವ ಇವರು ಮಾನವ ಹೆಗಲ ಮೇಲೆಯೇ ಕುಳಿತು ಮೆರವಣಿಗೆ ಹೊರಡುತ್ತಾರಲ್ಲ ! ಇದು ಎಂಥ ವಿಪರ್ಯಾಸ ? ನಾಲ್ಕು ಮಂದಿಯ ಹೆಗಲ ಮೇಲೆ ಏನನ್ನು ಹೊತ್ತೊಯ್ಯುತ್ತಾರೆ ಎಂಬ ಸಾಮಾನ್ಯ ಸಂಗತಿಕೂಡ ಇವರಿಗೆ ತಿಳಿಯಬಾರದೆ ? ದಿಗ್ವಿಜಯವಂತಿರಲಿ ಒಂದು ಬಾಳೆ ಹಣ್ಣಿನ ಕುಸ್ತಿಯನ್ನಾದರೂ ಇವರು ಗೆದ್ದು ಬಂದಿದ್ದಾರೆಯೋ ? ಕೊನೆಯ ಪಕ್ಷ ಇವರು ಎಂದಾದರೊಂದು ದಿನ ಯಾವುದಾದರೊಬ್ಬ ಭಕ್ತನ ಮನೆಗೆ ತಾವಾಗಿ ಹೋಗಿ ಅವನ ಕಷ್ಟ ಸುಖ ವಿಚಾರಿಸಿದ್ದಾರೆಯೆ ? ಸಾವಿರಗಟ್ಟಲೆ ದಕ್ಷಿಣೆ ಇಲ್ಲದೆ ಯಾರ ಮನೆಯ ಹತ್ತಿರಕ್ಕೂ ಬಾರದ ಇವರು ತಮ್ಮನ್ನು ತಾವೇ ಮಾರಾಟಕ್ಕಿಟ್ಟುಕೊಂಡ ದಲ್ಲಾಳಿಗಳೊ ?

ಪರಮವೈರಾಗ್ಯರಾದ ತಮ್ಮ ಹೊಟ್ಟೆಗೆ ಬೇಕಾಗುವ ಅನ್ನ ಆಹಾರಗಳನ್ನು ತಾವು ಸಂಪಾದಿಸದ ಈ ಪರಾನ್ನ ಭಕ್ತರನ್ನು ಈ ಜನರು ಯಾಕಾದರೂ ಮೆರೆಸುತ್ತಾರೋ ? ಇಂಥ ಆಡಂಬರದ ಭಕ್ತ ಪ್ರದರ್ಶನವಾದರೂ ಇವರಿಗೆ ಯಾಕೆ ಬೇಕೋ ? ತಿಳಿಯದು !

○ ಸಿಗ್ರಾಮಪ್ಪ ಬಾಲಪ್ಪಗೋಳ್

# ಮೂಡಬಿದರೆಯಲ್ಲೊಬ್ಬ ಬಂಗಾರದ ಮನುಷ್ಯ



ಮೋಹನ್ ಆಳ್ವಾ ಅವರೊಂದಿಗೆ ಪತ್ರಿಕೆಯ ಸಂಪಾದಕ

ತೀರಾ ಇತ್ತೀಚೆಗೆ ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯಲ್ಲಿ ಕನ್ನಡ ನುಡಿಸಿರಿ ಎಂಬ ಕಾರ್ಯಕ್ರಮವೊಂದು ಜರುಗಿತು. ಈ ಬಗ್ಗೆ ನಾನು ಮೂರ‍್ನಾಲ್ಕು ವರ್ಷಗಳಿಂದ ಕೇಳುತ್ತಲೆ ಇದ್ದೆ. ಹೋಗಲೆಬೇಕೆಂಬ ತುಡಿತವಿದ್ದರೂ ಹೋಗಲು ಸಾಧ್ಯವಾಗಿರಲಿಲ್ಲ.

ನನಗೆ ತಿಳುವಳಿಕೆ ಬಂದಂದಿನಿಂದಲೂ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸುವ ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿ ಕಹಿ ಅನುಭವ ಇರುವ ನನಗೆ, ಇಂಥ ಕನ್ನಡದ ಜಾತ್ರೆಗಳೆಂದರೆ ಸ್ವಲ್ಪ ಮಟ್ಟಿಗೆ ಅಲರ್ಜಿಯೆ.

ಮೂರುದಿನಗಳ ಕಾಲ ಮೂಡಬಿದರೆ ಸಮೀಪದ ಆಳ್ವಾಸ್ ಎಜ್ಯುಕೇಷನ್ ಟ್ರಸ್ಟ್‌ನ ಪ್ರಾಂಗಣದಲ್ಲಿ ನಡೆದ ನುಡಿಸಿರಿ ಕಾರ್ಯಕ್ರಮ ನೋಡಿದ– ಕೇಳಿದ ಮೇಲೆ ಇಂಥ ಎಷ್ಟು ಸಮ್ಮೇಳನಗಳಿಗಾದರೂ ಹೋಗಬಹುದು ಅನಿಸಿತು. ಆಳ್ವಾಸ್ ಎಜ್ಯುಕೇಶನ್ ಟ್ರಸ್ಟನ ಮುಖ್ಯರಾದ ಡಾ. ಮೋಹನ್ ಆಳ್ವಾರ ತುಡಿತ , ಕಾಳಜಿ, ಸಮಯ ಪ್ರಜ್ಞೆ ಮುಂತಾದವೆಲ್ಲ ಸಮ್ಮೇಳನದ ಉದ್ದಕ್ಕೂ ಕಂಡುಬಂತು. ಸ್ವತಃ ಭರತನಾಟ್ಯ ಕಲಾವಿದರಾಗಿರುವ ಡಾ.ಮೋಹನ್ ಆಳ್ವಾ ಸಾಹಿತ್ಯದ, ಸಂಗೀತ ಕಲಾವಿದರನ್ನು – ಕಲಾ ರಸಿಕರನ್ನು ಹೇಗೆ ಕಾಣಬೇಕು ? ಎಂಬ ಸಹೃದಯತನ ಎದ್ದು ಕಾಣುತ್ತಿತ್ತು.

ಮತ್ತೊಂದು ವಿಶಿಷ್ಟ ಸಂಗತಿಯೆಂದರೆ ನುಡಿಸಿರಿಯ ಈ ಭವ್ಯ ವೇದಿಕೆ ನೋಡುತ್ತಿರುವಂತೆಯೆ ಇಡೀ ದಕ್ಷಿಣ ಕನ್ನಡದ ಜನತೆಯ ಗ್ರಾಮೀಣ ಪರಿಸರ ಥಟ್ಟನೆ ನೆನಪಾಯಿತು. ಹಳ್ಳಿಗಳ ಭವ್ಯವಾದ, ಕಲಾಕುಸುರಿಯ ಮನೆಗಳು, ಅವರು ಹಿಂದಿನ ಕಾಲದಲ್ಲಿ ಬಳಸುತ್ತಿದ್ದ ವಸ್ತುಗಳು, ಭತ್ತದ ತೆನೆಗಳಿಂದ ಅಲಂಕೃತವಾದ ಸಭಾವೇದಿಕೆ ಕಣ್ಣ ಮನ ಸೆಳೆಯುವಂತೆ ಅಚ್ಚುಕಟ್ಟಾಗಿತ್ತು. ಸಮ್ಮೇಳನದ ಅಧ್ಯಕ್ಷರಾದ ನಾಡೋಜ , ಕನ್ನಡದ ಹೆಮ್ಮೆಯ ಕವಿ ಡಾ. ಚೆನ್ನವೀರ ಕಣವಿಯವರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು , ಅವರ ಮುಂದುಗಡೆ ಕನ್ನಡ ಸಾಹಿತ್ಯದ ಮಹತ್ವದ ಪುಸ್ತಕಗಳನ್ನು ಹೊತ್ತ ಮೆರವಣಿಗೆ ಕನ್ನಡದ ಸಂಸ್ಕೃತಿ , ಸೊಬಗನ್ನು ಸಂಭ್ರಮಿಸುತ್ತಿತ್ತು.

ಇಡೀ ಸಮ್ಮೇಳನದ ರೂವಾರಿಯಾಗಿದ್ದರೂ ಡಾ. ಮೋಹನ್ ಆಳ್ವಾ ಎಲ್ಲೂ ತಮ್ಮ ಹಿರಿಮೆಯನ್ನು ತೋರದೆ ಏರಿದವನು ಚಿಕ್ಕವನಾಗಿರಬೇಕು ಎಂಬ ಕವಿ ಕುವೆಂಪು ಅವರ ಮಾತಿಗೆ ಸಾಕ್ಷಿಯಾಗಿ ನಿಂತರು. ಬೆಳಿಗ್ಗೆ ೫ ಗಂಟೆಯ ಸಂಗೀತ ಕಾರ್ಯಕ್ರಮದೊಂದಿಗೆ ಶುರುವಾದ ಸಭೆ, ರಾತ್ರಿ ಮನರಂಜನ ಕಾರ್ಯಕ್ರಮಗಳಲ್ಲೂ ಜನ ದಣಿವರಿಯದೆ ಉಲ್ಲಾಸದಿಂದ ಭಾಗವಹಿಸುತ್ತಿದ್ದರು.



ಆಳ್ವಾಸ್ ಪ್ರಾಂಗಣದಲ್ಲಿಯೇ ರಾತ್ರಿ ಮೂರು ವೇದಿಕೆಗಳು ಅವರರ ಅಭಿರುಚಿಗೆ ತಕ್ಕಂತೆ ಅಲ್ಲಲ್ಲಿಯ ಕಾರ್ಯಕ್ರಮಗಳು. ಎಲ್ಲಾ ಕಡೆಗೂ ಅಚ್ಚುಕಟ್ಟಾದ ವೇದಿಕೆ, ಕುಳಿತುಕೊಳ್ಳುವುದಕ್ಕೆ ಆಸನದ ವ್ಯವಸ್ಥೆ.

ಸಮ್ಮೇಳದ ಮತ್ತೊಂದು ವೈಶಿಷ್ಯವೆಂದರೆ ಕನ್ನಡದ ಪುಸ್ತಕ ಮಾರಾಟಗಾರರು ಹೆಚ್ಚಿನ ಸಂಖ್ಯೆಯಲ್ಲಿಯೆ ಇಲ್ಲಿ ಸೇರಿದ್ದರು. ಗ್ರಾಮೀಣ ಕರಕುಶಲ ಕಲೆಗಾರರು ತಯಾರಿಸಿದ ಬಟ್ಟೆಗಳು ಎಲ್ಲರ ಗಮನ ಸೆಳೆದವು. ಇದೆಲ್ಲಕ್ಕೂ ಕಳಸವಿಟ್ಟಂತೆ ಡಾ.ಮೋಹನ್ ಆಳ್ವಾ ಅವರೇ ಸಂಗ್ರಹಿಸಿ ಪ್ರದರ್ಶಿದ ವಸ್ತು ಪ್ರದರ್ಶನ ಭವ್ಯವೂ - ದಿವ್ಯವೂ ಆಗಿತ್ತು. ಇವನ್ನೂ ನೋಡುತ್ತಿದ್ದರೆ ಸುಮಾರು ೨೦೦-೩೦೦ ವರ್ಷಗಳಷ್ಟು ಹಿಂದಿನ ದಕ್ಷಿಣ ಕನ್ನಡ ಜಿಲ್ಲೆಯ ಸೊಗಡಿನ ಕಥೆಯನ್ನು ಇಲ್ಲಿರುವ ಪ್ರತಿ ವಸ್ತುಗಳೂ ಹೇಳುತ್ತಿದ್ದವು.ಒಟ್ಟನಲ್ಲಿ ಶಿಸ್ತು, ಸ್ವಚ್ಚತೆ, ಸಂಯಮ ಒಡಮೂಡಿದ ಸಮ್ಮೇಳನದ ಅಚ್ಚುಕಟ್ಟುತನದಿಂದ ಯಶಸ್ವಿಯಾಗಿತ್ತು.

ಪ್ರತಿ ವರ್ಷವೂ ಪ್ರತಿಭಾನಿತ್ವ ಮಕ್ಕಳನ್ನು ಗುರುತಿಸಿ ಅವರಿಗೆ ತಮ್ಮ ಆಳ್ವಾಸ್ ಎಜ್ಯುಕೇಷನ್ ಫೌಂಡೇಶನ್ ಮೂಲಕ ಅವರ ವಿದ್ಯಾಭ್ಯಾಸದ ಎಲ್ಲಾ ಖರ್ಚನ್ನು ಮೋಹನ್ ಆಳ್ವಾರೆ ವಹಿಸಿಕೊಂಡಿರುವುದು ನನಗೆ ಅವರ ಬಗ್ಗೆ ಪ್ರೀತಿ ಇಮ್ಮಡಿಯಾಗುವಂತೆ ಮಾಡಿತು. ಶಿಕ್ಷರಿಲ್ಲದ ಸರಕಾರಿ ಶಾಲೆಗೂ ಕೂಡ ಶಿಕ್ಷರನ್ನು ನೇಮಿಸಿ ಅವರ ಸಂಬಳವನ್ನು ತಮ್ಮ ಸಂಸ್ಥೆಯ ವತಿಯಿಂದಲೇ ನೀಡುತ್ತಿರುವ ಕಾರ್ಯ ನಿಜಕ್ಕೂ ಶ್ಲಾಘನೀಯ.

ಪ್ರತಿ ವರ್ಷ ನುಡಿಸಿರಿ ಕನ್ನಡ ಸಾಹಿತ್ಯ ಸಂಸ್ಕೃತಿಯ ಕಾರ್ಯಕ್ರಮವನ್ನು ಏರ್ಪಡಿಸಿ ಅಲ್ಲಿಗೆ ಸನ್ಮಾನಿತರನ್ನು ಆಹ್ವಾನಿಸಿ ಅವರಿಗೆ ಗೌರವಧನ ನೀಡಿ, ಅವರನ್ನು ಸತ್ಕರಿಸಿ ಕಳಿಸುವ ಪರಿ ಯಾರಿಗಾದರೂ ಬೆರಗುಗೊಳಿಸುತ್ತದೆ. ಇದಲ್ಲದೆ ವಿರಾಸತ್ ಎಂಬ ಸಂಗೀತಮಯವಾಗಿರುವ ಕಾರ್ಯಕ್ರಮಕ್ಕೆ ಅಂತರಾಷ್ಟ್ರೀಯ ಕಲಾವಿದರನ್ನು ಕರೆಸಿ, ಸಂಗೀತ ರಸದೌತಣವನ್ನು ಉಣಬಡಿಸುವುದಲ್ಲದೆ , ಪ್ರತಿಭಾನ್ವಿತ ಕಲಾವಿದರನ್ನು ಗುರುತಿಸಿ ಅವರನ್ನು ಸತ್ಕರಿಸುವ ರೀತಿ ಅಚ್ಚರಿ ಮೂಡಿಸುತ್ತದೆ.

ಸಮಾಜಕ್ಕಾಗಿ ಏನೆಲ್ಲ ನೀಡುತ್ತಿದ್ದರು ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುವ ಎಂಬ ಮಾತು ಅರ್ಥಮಾಡಿಕೊಂಡೋ ಏನೋ ಮೋಹನ್ ಆಳ್ವಾ ಅದ್ಯಾವುದನ್ನು ತಮ್ಮ ತಲೆಯಲ್ಲಿ ತುಂಬಿಕೊಂಡಿಲ್ಲ. ಏರಿದವನು ಚಿಕ್ಕನಾಗಿರಬೇಕು ಎಂಬ ಮಾತಿಗೆ ಉದಾಹರಣೆಯಾಗಿ ನಿಲ್ಲುತ್ತಾರೆ. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುತ್ತ ದಿನಗಳೆದಂತೆ ರೊಕ್ಕಸ್ಥ ರಕ್ಕಸರೆ ಆಗಿರುವ ಬಹುತೇಕ ಶಿಕ್ಷಣ ಸಂಸ್ಥೆಗಳ ಮುಖಂಡರಂತೆ ಮೋಹನ್ ಆಳ್ವಾ ಆಗಿರದೆ. ಮಾನವೀಯತೆ ಅನುಕಂಪ, ಪ್ರೀತಿ ತುಂಬಿರುವ ಬಂಗಾರದ ಮನುಷ್ಯನೆ ಆಗಿದ್ದಾನೆ.

# ಬಸವಣ್ಣನವರ ಅಂತರಂಗ ಬಹಿರಂಗ ವಿರೋಧಿಗಳು ಯಾರು ?



ಜಗತ್ತಿನ ಅನುಭಾವಿಗಳದ್ದೇ ಒಂದು ವಿಶಿಷ್ಟ ಪಂಗಡ. ಅವರು ಯಾವ ಧರ್ಮದಲ್ಲಿಯೇ ಹುಟ್ಟಿರಲಿ, ಯಾವ ಭಾಷೆಯನ್ನೇ ಮಾತಾಡಲಿ, ಯಾವ ಕಾಲದಲ್ಲಿಯೋ ಜೀವಿಸಿರಲಿ – ಅವರೆಲ್ಲರ ವಿಚಾರ – ಆಚಾರಗಳು ಸಾಮಾನ್ಯವಾಗಿ ಒಂದೇ ಬಗೆಯವು. ದೇಶ ಕಾಲ ಪರಿಸರಗಳನ್ನು ಮೀರಿನಿಂತ ಅನುಭಾವಿಗಳು. ಸತ್ಯವನ್ನು ಸಾರುತ್ತಾರೆ. ಶುಚಿ ಜೀವನವನ್ನು ನಡೆಸುತ್ತಾರೆ. ಅಂತಹ ವರ್ಗಕ್ಕೆ ಸೇರಿದವರು ಶಿವಶರಣರು. ಆ ಶರಣ ಸಂಕುಳದ ನೇತಾರರು ಬಸವಣ್ಣನವರು. ಅವರು ಮಾಡಿದ ಸೇವೆ ಅನುಪಮ.

ಬಸವಣ್ಣನವರನ್ನು ಬರೀ ಧರ್ಮೋದ್ಧಾರಕರೆನ್ನೋಣವೆ ? ಸಮಾಜ ಸುಧಾರಕರೆಂದು ಕರೆಯೋಣವೆ ? ಸಾಹಿತ್ಯ ಸೇವಕರೆಂದು ಹೆಸರಿಸೋಣವೆ ? ಸ್ತ್ರೀಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆ ತಂದುಕೊಟ್ಟ ಮಹಾತ್ಮ ಎಂದು ಕರೆಯೋಣವೆ ? ಮನಶಾಸ್ತ್ರಜ್ಞನೆನ್ನೋಣವೆ ? ರಾಜಕೀಯ ಮುತ್ಸದ್ಧಿ ಎಂದು ಕರೆಯೋಣವೆ ?

ಒಟ್ಟಿನಲ್ಲಿ ಭಾರತದ ತುಂಬೆಲ್ಲ ಹಬ್ಬಿಹರಡಿದ್ದ ಡಬ್ಬಗಳ್ಳಿಯನ್ನು ಕಿತ್ತೊಗೆದು ಭೂಮಿಯನ್ನು ಹದಗೊಳಿಸಿ ಹೋದವರು. ಪರಲೋಕವನ್ನೇ ಭೂಲೋಕಕ್ಕೆ ತರಲೆತ್ನಿಸಿದವರು ಬಸವಣ್ಣನವರು.

ಇಂತಹ ಮಹಾತ್ಮನ ಅನುಯಾಯಿಗಳ ಇಂದಿನ ಸ್ಥಿತಿಯನ್ನು ನೆನೆದರೆ ಕಣ್ಣಲ್ಲಿ ನೀರು ಬರುತ್ತದೆ. ಒಂದೆಡೆ ವಿರಕ್ತರು, ಮತ್ತೊಂದೆಡೆ ಪಂಚಾಚಾರ್ಯರು ಎರಡು ಪಂಗಡದವರು ಬಸವಾದಿ ಪ್ರಮಥರ ಉದಾತ್ತ ಉತ್ತಮ ತತ್ವಗಳನ್ನು ಜೀವಂತವಾಗಿ ಉಳಿಸಿಕೊಂಡು ಬರಬೇಕಾದವರು. ಆದರೆ ಅವರು ಲಿಂಗವಂತ ಸಮಾಜವನ್ನು ಒಡೆದು ಛಿದ್ರ ವಿಚ್ಛಿದ್ರಗೊಳಿಸುತ್ತಿರುವ ಇಂದಿನ ಪರಿಸ್ಥಿತಿ ಭಯಾನಕವಾಗಿದೆ.

ಪಂಚಾಚಾರ್ಯರ ಪಂಗಡದವರು ಬಸವಣ್ಣನವರನ್ನು ಬಹಿರಂಗವಾಗಿ ವಿರೋಧಿಸುತ್ತಿರುವರು. ಬಹಿರಂಗ ವಿರೋಧಿಗಳಾ ಇವರೊಡನೆ ಸೋಲಲಿ, ಗೆದೆಯಲಿ, ನೇರವಾಗಿ ಹೋರಾಡಬಹುದು. ಆದರೆ ಬಸವಣ್ಣನವರ ವಚನಗಳನ್ನು ದಿನ ನಿತ್ಯವೂ ಪಠಿಸುತ್ತಾ ಬಸವ ತತ್ವ ಪ್ರಚಾರಕ್ಕಾಗಿ ಕಂಕಣಬದ್ಧರಾದವರು ನಾವು ಎಂದು ಹೆಮ್ಮೆಯಿಂದ ಬೆನ್ನು ಚಪ್ಪರಿಸಿಕೊಳ್ಳುತ್ತಿರುವ ಅನೇಕ ವಿರಕ್ತ ವರ್ಗದವರು ನನ್ನ ದೃಷ್ಟಿಯಲ್ಲಿ ಬಸವಣ್ಣನವರ ಅಂತರಂಗದ ದ್ರೋಹಿಗಳು. ಇಂತಹ ಹಿತಶತ್ರುಗಳೊಂದಿಗೆ ಹೋರಾಡುವುದು ಬಹುಕಷ್ಟ.

o ಉತ್ತಂಗಿ ಚೆನ್ನಪ್ಪ

ಪಂಚಾಚಾರ್ಯರ ಪಂಗಡದವರು ಬಸವಣ್ಣನವರನ್ನು ಬಹಿರಂಗವಾಗಿ ವಿರೋಧಿಸುತ್ತಿರುವರು. ಬಹಿರಂಗ ವಿರೋಧಿಗಳಾ ಇವರೊಡನೆ ಸೋಲಲಿ, ಗೆದೆಯಲಿ, ನೇರವಾಗಿ ಹೋರಾಡಬಹುದು. ಆದರೆ ಬಸವಣ್ಣನವರ ವಚನಗಳನ್ನು ದಿನ ನಿತ್ಯವೂ ಪಠಿಸುತ್ತಾ ಬಸವ ತತ್ವ ಪ್ರಚಾರಕ್ಕಾಗಿ ಕಂಕಣಬದ್ಧರಾದವರು ನಾವು ಎಂದು ಹೆಮ್ಮೆಯಿಂದ ಬೆನ್ನು ಚಪ್ಪರಿಸಿಕೊಳ್ಳುತ್ತಿರುವ ಅನೇಕ ವಿರಕ್ತ ವರ್ಗದವರು ನನ್ನ ದೃಷ್ಟಿಯಲ್ಲಿ ಬಸವಣ್ಣನವರ ಅಂತರಂಗದ ದ್ರೋಹಿಗಳು.

# ಗಂಡಾಂತರವನ್ನು ಹೇಗೆ ಎದುರಿಗೊಳ್ಳಬೇಕು ?



ಇಳಿಯ ವಯಸ್ಸಿನಲ್ಲಿ ತಮ್ಮ ಮನೆಯ ಕೋಣೆಯಲ್ಲಿ ಕುಳಿತುಕೊಂಡು ಬರೆಯುವುದು – ಓದುವುದು ಮಾಡಿಕೊಂಡಿರಬೇಕಾದ ಜೀವ ಇನ್ನೂ ಕನ್ನಡನಾಡಿನ ಉದ್ದಗಲಕ್ಕೂ ಪಾದರಸದಂತೆ ಸುಳಿದಾಡುತ್ತಿದೆ. ವಿಚಾರ ಹಂಚಿಕೊಳ್ಳುತ್ತ ತಿರುಗಾಡದೆ , ಒಂದೆ ಕಡೆ ಕುಳಿತಿರುವುದೆ, ಇವರಿಗೆ ಬೇಸರವಂತೆ. ! ೦ ಸಂಪಾದಕ

ಮನುಷ್ಯನು ಗಂಡಾಂತರಗಳನ್ನು ಎದುರಿಸಿ ಹೋಗಬೇಕು. ಆದರೆ ಅನವಶ್ಯಕವಾಗಿ ಗಂಡಾಂತರಗಳನ್ನು ಮೈಮೇಲೆ ತಂದುಕೊಳ್ಳಬಾರದು. ಗಂಡಾಂತರಗಳನ್ನು ಆಮಂತ್ರಿಸಿಕೊಂಡರೆ ಅವು ಹೊರಗೆ ಹೋಗದೆ ಮನೆಯಲ್ಲಿಯೇ ಬೀಡಾರ ಹೂಡಿಕೊಂಡು ಇರಬೇಕೆನ್ನುತ್ತವೆ.

ಗಂಡಾಂತರಗಳನ್ನು ಯಾರೊಬ್ಬರೂ ಅಪೇಕ್ಷಿಸಬಾರದು. ಅವು ಬಂದಂತೆ ಅವುಗಳನ್ನು ಎದುರಿಸಬೇಕು. ಗಂಡಾಂತರ ಕಡಿಮೆ ಇದ್ದಾಗಲೇ ಅದರ ಬಗೆಗೆ ಮುನ್ನೆಚ್ಚರಿಕೆ ವಹಿಸಬೇಕು. ಆ ಎಚ್ಚರಿಕೆ ಇರಿಸಿಕೊಂಡು ಅದನ್ನು ಎದುರಿಸಿದರೆ ಅದು ಈ ಮನುಷ್ಯ ನನಗಿಂತಲೂ ಗಟ್ಟಿ ಎಂದುಕೊಂಡು ಪಲಾಯನ ಹೇಳುತ್ತದೆ. ಗಂಡಾಂತರದ ಬಗೆಗೆ ಎಚ್ಚರಿಕೆ ಇರಿಸಿಕೊಂಡಿರುವ ಮನುಷ್ಯನು ಮುಂಚಿತವಾಗಿಯೇ ಸನ್ನದ್ಧನಾಗಿರುತ್ತಾನೆ.

ಯಾವ ಮನುಷ್ಯನೇ ಇರಲಿ, ಅವನ ಹೋರಾಟಕ್ಕೆ ಘನತೆ ಬರಬೇಕಾದರೆ , ಅವನು ಗಂಡಾಂತರವನ್ನು ಎದುರಿಸಿ ಅದರ ಮೇಲೆ ಜಯ ಸಾಧಿಸಿರಬೇಕು. ಇತ್ತ ದೆವ್ವ, ಅತ್ತ ಆಳವಾದ ಸಮುದ್ರ ಎನ್ನುವ ಸ್ಥಿತಿಯಿದ್ದರೂ ಮನುಷ್ಯನು, ಅಂಜಿಕೆಯನ್ನು ಸಮುದ್ರಕ್ಕೆ ತಳ್ಳಿ ಧೈರ್ಯ ತುಂಬಿಕೊಂಡು ಆತ್ಮವಿಶ್ವಾಸದಿಂದ ಮುನ್ನುಗ್ಗಿ ಹೋಗಿ ಗಂಡಾಂತರವನ್ನು ಮುಖಾಮುಖಿಯಾಗಿ ಎದುರಿಸಬೇಕು.

ಗಂಡಾಂತರವು ಯಾವಾಗಲೂ ಹೆದರಿಕೊಳ್ಳುವವರನ್ನು ಹೆದರಿಸುತ್ತದೆ. ಆದರೆ ಹೆದರಿಸುವವರನ್ನು ಕಂಡರೆ ಹೆದರಿ ಓಡುತ್ತದೆ. ಜೀವನದಲ್ಲಿ ಗಂಡಾಂತರ ಇದ್ದರೇನೇ ಮನುಷ್ಯನಲ್ಲಿ ಇರುವ ಲೋಹದ ಪರೀಕ್ಷೆ ಆಗುತ್ತದೆ. ಗಂಡಾಂತರ ಇಲ್ಲದಿದ್ದರೆ ಜೀವನದಲ್ಲಿ ಸ್ವಾರಸ್ಯವೇ ಇರುವುದಿಲ್ಲ.

ಹೆದರಿಕೊಳ್ಳುವ ಸ್ವಭಾವವನ್ನು ಬಿಟ್ಟು ಮನುಷ್ಯನು ಗಂಡಾಂತರವನ್ನು ಓಡಿಸುವ ಧೈರ್ಯವನ್ನು ತನ್ನಲ್ಲಿ ತಂದುಕೊಳ್ಳಬೇಕು. ಹುಲಿಯ ಮರಿಗಳನ್ನು ಹಿಡಿದುಕೊಳ್ಳಬೇಕೆನ್ನುವವನಲ್ಲಿ ಹುಲಿಯ ಗವಿಯನ್ನು ಒಳಹೊಕ್ಕು ಎದುರಿಸಬೇಕೆನ್ನುವ ಧೈರ್ಯಶಾಲಿಗೆ ಕಣ್ಣಿನಲ್ಲಿ ದೃಷ್ಟಿ ಇದ್ದರೆ ಸಾಲದು ತೋಳಿನಲ್ಲಿ ಶಕ್ತಿಯೂ ಇರಬೇಕು.

ಮೇಮೇಲೆ ಗಂಡಾಂತರ ಬಂದಾಗ ಮನುಷ್ಯನಲ್ಲಿ ಧೈರ್ಯ ಇದ್ದರೆ, ಆ ಗಂಡಾಂತರ ಆಗಲೇ ಅರ್ಧ ಕಳೆದು ಹೋಗಿರುತ್ತದೆ. ಗಂಡಾಂತರ ಮೈಮೇಲೆ ಬಂದಾಗ ಶಸ್ತ್ರಾಸ್ತ್ರಗಳಿಗಿಂತಲೂ ಧೈರ್ಯವೇ ಹೆಚ್ಚು ಕೆಲಸ ಮಾಡುತ್ತದೆ.

# ಜೆ.ಎಚ್.ಪಟೇಲರ ಕಣ್ಣಲ್ಲಿ ಆರ್.ಎಸ್.ಎಸ್

ಆರೆಸ್ಸಸ್ ಒಂದು ನಿಷ್ಕಳಂಕ ಸಂಸ್ಥೆ. ನಲವತ್ತು ವರ್ಷಗಳ ಸುಧೀರ್ಘ ರಾಜಕೀಯ ಜೀವನದಲ್ಲಿ ನಾನು ಎಂದೂ ಆರೆಸಸ್ಸನ್ನು ಟೀಕಿಸಿಲ್ಲ.

ಸಾಮಾಜಿಕ ನ್ಯಾಯ ಪ್ರತಿಪಾದನೆ ಮತ್ತು ಅಲ್ಪಸಂಖ್ಯಾತರ ರಕ್ಷಣೆಗಾಗಿ ಕೇಂದ್ರದಲ್ಲಿ ಅಧಿಕಾರವನ್ನೇ ತ್ಯಾಗಮಾಡಿದ ವಿ.ಪಿ.ಸಿಂಗ್ ಇನ್ನೂ ಬದುಕಿರುವಾಗಲೇ ಅದೇ ಪಕ್ಷದ ಹೆಚ್.ಡಿ.ದೇವೇಗೌಡರ ಬಾಯಿಂದ ಬಂದ ಈ ಮಾತು ಕೇಳಿ ಮುಸ್ಲಿಮರು ಬೆಚ್ಚಿಬಿದ್ದರು.

ತುರ್ತುಸ್ಥಿತಿಯ ಎರಡು ದಶಕಗಳ ನೆನಪಿಗಾಗಿ ಬೆಂಗಳೂರಿನಲ್ಲಿ ಆರೆಸ್ಸಸ್ ನವರು ಸಮಾರಂಭವೊಂದನ್ನು ಏರ್ಪಡಿಸಿದ್ದರು. ಪತ್ರಕರ್ತ ಅರುಣಶೌರಿ,ಬಿ.ಜೆ.ಪಿ.ಯ ನಾಯಕ ಅಡ್ವಾನಿ, ಹೆಚ್.ಡಿ.ದೇವೇಗೌಡ ಮತ್ತು ಜೆ.ಎಚ್.ಪಟೇಲರು ಇದರಲ್ಲಿ ಭಾಗವಹಿಸಿದ್ದರು. ದೇವೇಗೌಡರು ಮೇಲಿನಂತೆ ಅಪ್ಪಣೆಕೊಡಿಸಿದ್ದು ಈ ಸಂದರ್ಭದಲ್ಲಿಯೇ.

ವಿಚಾರ, ಸಿದ್ಧಾಂತ,ಚರಿತ್ರೆಯ ಲವಲೇಶ ಕಲ್ಪನೆ ಇರದ ದೇವೇಗೌಡರು ತಮಗರಿವಿಲ್ಲದಂತೆಯೇ ಅಲ್ಪಸಂಖ್ಯಾತರ ಪಾಳೆಯಕ್ಕೆ ಕಳುಹಿಸಿದ ಈ ರಾಂಗ್ ಸಿಗ್ನಲನ್ನು ನಿಸ್ತೇಜಗೊಳಿಸಿ ಮಾತನಾಡಿದ್ದು ಪಕ್ಷ ಹಾಗೂ ಸರಕಾರದ ಇನ್ನೊಬ್ಬ ಪ್ರಮುಖ ನಾಯಕರಾದ ಪಟೇಲರು. ಪಟೇಲರು ಕಿಕ್ಕಿರಿದ ಸಭೆಗೆ ಹೇಳಿದ್ದು ಇಷ್ಟು :

ನಮ್ಮ ಸಿದ್ಧಾಂತ ಹಾಗೂ ನಿಮ್ಮ ಶಿಸ್ತು ಸೇರಿದರೆ ಬೇಕಾದ್ದನ್ನು ಸಾಧಿಸಬಹುದು, ಆದರೆ ಅದು ಸಾಧ್ಯವಾಗದ ವಿಚಾರ.

ಶಿಸ್ತಿಲ್ಲದೆ ಸಿದ್ಧಾಂತ ಅಪಾಯಕಾರಿಯಲ್ಲ ; ಆದರೆ ಸಿದ್ಧಾಂತವೇ ಇಲ್ಲದ ಶಿಸ್ತು ರೂಢಿಸಿಕೊಂಡಿರುವ ಬಿ.ಜೆ.ಪಿ. ಈ ದೇಶಕ್ಕೆ ಅಪಾಯಕಾರಿಯೆಂಬುದನ್ನು ಅವರು ಸೂಚ್ಯವಾಗಿ ಹೇಳುತ್ತಿದ್ದರು. ಮಹಾತ್ಮಾಗಾಂಧಿಯನ್ನು ಕೊಂದ ಶಿಸ್ತು ಮತ್ತು ಬಾಬರಿ ಮಸೀದಿಯನ್ನು ಕೆಡವಿ ದೇಶಕ್ಕೆ ಬೆಂಕಿಯಿಟ್ಟ ಶಿಸ್ತಿನ ಜೊತೆಗೆ ತಮ್ಮ ಸಿದ್ಧಾಂತ ಹೊಂದಾಣಿಕೆಯಾಗುವುದಿಲ್ಲವೆಂಬುದನ್ನು ಅವರು ಒಂದೆ ವಾಕ್ಯದಲ್ಲಿ ಸ್ಪಷ್ಟಪಡಿಸಿದಂತೆ ಗೋಚರಿಸಿದರು. ಸಭೆಯಲ್ಲಿ ಕುಳಿತಿದ್ದ ಘಟಾನುಘಟಿ ನಾಯಕರೆಲ್ಲರೂ ಒಂದು ಕ್ಷಣ ಚಡಪಡಿಸಿದ್ದು ಈ ಕಾರಣಕ್ಕಾಗಿಯೇ.

ಖ್ಯಾತ ನಾಟಕಕಾರ ಜಾರ್ಜ್ ಬರ್ನಾಡ್ ಷಾ ಕುರೂಪಿ. ತುಸು ದಡ್ಡಿಯಾದರೂ ಅಪ್ರತಿಮ ಸುಂದರಿಯಾದ

**ಆರೆಸ್ಸಸ್ ಒಂದು ನಿಷ್ಕಳಂಕ ಸಂಸ್ಥೆ. ನಲವತ್ತು ವರ್ಷಗಳ ಸುಧೀರ್ಘ ರಾಜಕೀಯ ಜೀವನದಲ್ಲಿ ನಾನು ಎಂದೂ ಆರೆಸಸ್ಸನ್ನು ಟೀಕಿಸಿಲ್ಲ.**



# ಹಕೀಕತ್



ಶಿಸ್ತಿಲ್ಲದೆ
ಸಿದ್ಧಾಂತ ಅಪಾಯಕಾರಿಯಲ್ಲ
; ಆದರೆ ಸಿದ್ಧಾಂತವೇ
ಇಲ್ಲದ ಶಿಸ್ತು
ರೂಢಿಸಿಕೊಂಡಿರುವ ಬಿ.ಜೆ.ಪಿ.
ಈ ದೇಶಕ್ಕೆ ಅಪಾಯಕಾರಿ
ಯೆಂಬುದನ್ನು ಅವರು
ಸೂಚ್ಯವಾಗಿ
ಹೇಳುತ್ತಿದ್ದರು.
ಮಹಾತ್ಮಾ
ಗಾಂಧಿಯನ್ನು ಕೊಂದ ಶಿಸ್ತು
ಮತ್ತು ಬಾಬರಿ
ಮಸೀದಿಯನ್ನು ಕೆಡವಿ ದೇಶಕ್ಕೆ
ಬೆಂಕಿಯಿಟ್ಟ
ಶಿಸ್ತಿನ ಜೊತೆಗೆ ತಮ್ಮ
ಸಿದ್ಧಾಂತ
ಹೊಂದಾಣಿಕೆ ಯಾಗುವುದಿಲ್ಲ

ಯುವತಿಯೊಬ್ಬಳು ಷಾನ ಬುದ್ಧಿವಂತಿಕೆಗೆ ಮಾರುಹೋಗಿ ಆತನನ್ನು ಮದುವೆಯಾಗಲು ಬಯಸಿದಳು. ನನ್ನ ಚೆಲುವು ಮತ್ತು ನಿನ್ನ ಬುದ್ಧಿವಂತಿಕೆ ಸೇರಿದರೆ ನಮಗೆ ಹುಟ್ಟುವ ಮಗು ವಿಶ್ವವಿಖ್ಯಾತವಾಗುತ್ತದೆ ಎಂದಳು.

ಆಕಸ್ಮಾತ್ ಅದು ತಿರುಗಾ - ಮುರುಗಾ ಆದರೆ ? ಎಂದು ಕೇಳಿದ್ದರು.

ಈ ಘಟನೆಯನ್ನು ನೆನಪುಮಾಡಿಕೊಂಡೇ ತಾವು , ತಮ್ಮ ಸಿದ್ಧಾಂತ ಮತ್ತು ಬಿಜೆಪಿ ಶಿಸ್ತು ಸಾಧ್ಯವಿಲ್ಲವೆಂದು ಹೇಳಿದ್ದು ಎನ್ನುತ್ತಾ ಪಟೇಲರು ಮುಗುಳ್ನಕ್ಕರು.

o ಚಂದ್ರಶೇಖರ ತೌಡೂರ

## ಹೆಂಡತಿ ಗಯ್ಯಾಳಿಯಾಗಿರುವುದಕ್ಕೇ – ಗಂಡ ತತ್ವಜ್ಞಾನಿ !

ವಿಶ್ವ ಕಂಡ ಅನೇಕ ತತ್ವ ಜ್ಞಾನಿಗಳಲ್ಲಿ ಅಥೆನ್ಸ ನಗರದ ಸಾಕ್ರೆಟಿಸ್ ಒಬ್ಬರು. ಬಹಳ ಬುದ್ಧಿವಂತ ಮನುಷ್ಯ. ವ್ಯಕ್ತಿತ ವಿಕಾಸನಕ್ಕೆ ಅವರು ನೀಡಿದ ಅನೇಕ ತತ್ವಗಳು ಇಂದಿಗೂ ಪ್ರಸ್ತುತ. ಅವರು ಸನ್ಯಾಸಿಯಂತು ಅಲ್ಲ. ಸುಂದರ ಹೆಂಡತಿ ಇದ್ದಳು. ಅವಳ ಹೆಸರು ಝಾಂಕಿಸಿ. ಅದರ ಅರ್ಥ ಜಗಳಗಂಟಿ, ಗಯ್ಯಾಳಿ.! ಒಂದು ದಿನವು ಗಂಡನನ್ನು ಬಯ್ಯದೆ ಬಿಡುತ್ತಿರಲ್ಲಿಲ್ಲ, ಸಾಕ್ರೆಟಿಸ್ ಮಾತ್ರ ಒಂದು ದಿನವು ಆಕೆಗೆ ಎದುರು ಉತ್ತರ ನೀಡುತ್ತಿರಲ್ಲಿಲ್ಲ,ಸುಮ್ಮನಿರುತ್ತಿದ್ದರು.ಹೀಗಿರುವಾಗ ಒಮ್ಮೆ ಸಾಕ್ರೆಟಿಸ್‌ರು ತಮ್ಮ ಶಿಷ್ಯರಿಗೆ ಉಪದೇಶ ಮಾಡುತ್ತಿದ್ದರು, ಅವರ ಹೆಂಡತಿ ಕೂಗಿ ಕೂಗಿ ಸಾಕು ಉಪದೇಶ ಮುಗಿಸಿ ಒಳಗೆ ಬನ್ನಿ ಎಂದು ಕರೆಯುತ್ತಿದ್ದಳು. ಆದರೆ ಉಪದೇಶ ಅರ್ಧ ಮಾಡಿ ಹೋಗುವುದು ಸಾಕ್ರೆಟಿಸ್‌ರಿಗೆ ಇಷ್ಟವಿರಲಿಲ್ಲ. ಅವರ ತಾಳ್ಮೆ ಇಲ್ಲದ ಹೆಂಡತಿ ಬಿಸಿ ಬಿಸಿ ನೀರು ತಂದು ಉಪದೇಶ ಮಾಡುತ್ತಿರುವವರಲ್ಲಿಯೇ ಮಗ್ನರಾದ ಸಾಕ್ರೆಟಿಸ್ ಅವರ ಮೈ ಮೇಲೆ ಸುರಿದೇ ಬಿಟ್ಟಳು. ಸಾಕ್ರೆಟಿಸ್ ಮಾತ್ರ ಸುಮ್ಮನೆ ಉಪದೇಶ ಮಾಡುವುದರಲ್ಲಿಯೇ ತಲ್ಲಿನರಾಗಿದ್ದರು,ಒಂದು ಮಾತು ಹೆಂಡತಿಗೆ ಬಯ್ಯಲಿಲ್ಲ. ಇದನ್ನು ನೋಡಿ ಒಬ್ಬ ಶಿಷ್ಯ ಎದ್ದು ನಿಂತು ಕೇಳಿದ ಏನು ಗುರುಗಳೇ ನಿಮ್ಮ ಹೆಂಡತಿ ನಿಮಗೆ ಇಷ್ಟೊಂದು ಹಿಂಸೆ ಕೊಡುತ್ತಿದ್ದರು ನೀವು ಮಾತ್ರ ಒಂದು ಮಾತು ಆಡದೇ ಸುಮ್ಮನೆ ಇರುತ್ತಿರಿ, ನಿಮ್ಮ ಸ್ಥಾನದಲ್ಲಿ ನಾನು ಇದ್ದರೆ ಅವಳನ್ನು ಕೊಂದು ಬಿಡುತ್ತಿದ್ದೆ ಎಂದ. ಅದಕ್ಕೆ ಸಾಕ್ರೆಟಿಸ್ ಹೇಳಿದರು ನೋಡು ಶಿಷ್ಯ ಅವಳು ಬಯ್ಯುವ ಯಾವ ಶಬ್ದವು ನನಗೆ ಅರ್ಥವಾಗುವುದಿಲ್ಲ ಮತ್ತು ಅರ್ಥಮಾಡಿಕೊಳ್ಳುವದಕ್ಕೆ ನಾನು ಎಂದು ಪ್ರಯತ್ನಿಸಿಯು ಇಲ್ಲ. ಒಂದು ವೇಳೆ ಅವಳು ಬಯ್ಯುತ್ತಿರುವಾಗ ನಾನು ಎದುರು ಬಯ್ಯುತ್ತಿದ್ದರೆ ಇಷ್ಟೊತ್ತಿಗೆ ಅವಳನ್ನೊ ನಾನೋ ಇಲ್ಲವೇ ನನ್ನನ್ನು ನೀವೋ ಕಳೆದುಕೊಳ್ಳಬೇಕಾಗುತ್ತಿತ್ತು.

ಹೆಂಡತಿ ಗಯ್ಯಾಳಿಯಾದರೆ ಗಂಡ ತತ್ವಜ್ಞಾನಿ ಎನ್ನುವ ಮಾತು ನಿಜಕ್ಕೂ ಸಾಕ್ರೆಟಿಸ್‌ರ ಬದುಕನ್ನು ನೋಡಿಯೂ ನಾವು ಮರೆಯಬೇಕೆ ?

o ಅಮರೇಶ್ ಹಿರೇಮಠ , ಶಹಾಪುರ

# ಕರಿಬಟ್ಟೆ ಯುವಕರೂ ಅಯ್ಯಯ್ಯಪ್ಪ ಸ್ವಾಮಿಯೂ !



ಪ್ರತಿವರ್ಷ ಡಿಸೆಂಬರ್ ಹಾಗೂ ಜನೇವರಿ ತಿಂಗಳುಗಳು ಬಂದರೆಂದರೆ ದೇಶದ ಎಲ್ಲಾ ಕಡೆ ಕಪ್ಪು ಬಟ್ಟೆ ಧರಿಸಿರುವ ಅಯ್ಯಯ್ಯಪ್ಪ ಸ್ವಾಮಿಗಳ ಭಕ್ತರ ದಂಡೆ ನಿಮ್ಮ ಕಣ್ಣೆದುರಿಗೆ ಕಾಣಸಿಗುತ್ತಾರೆ. ಇವರಲ್ಲಿ ಬಹುತೇಕರು ಚಟಗಳ ದಾಸಾನು ದಾಸರಾಗಿದ್ದವರು, ರಾಬರಿ ಮಾಡಿದವರು, ಅನ್ಯಾಯ- ಅತ್ಯಾಚಾರಗಳನ್ನು ನೆರವೇರಿಸಿದವರು ಮುಂತಾದವರಿರುತ್ತಾರೆ.

ಆದರೆ ಇವರಿಗೆ ಅವ್ಯಾರು ಕಿವಿಮಾತು ಹೇಳಿದರೋ ? ಏನೋ ? ತಮ್ಮ ಚಟಗಳನ್ನು ಬಿಡಲಿಕ್ಕೆ, ಸುಳ್ಳುಗಳನ್ನು ಮಾಡದೆ ಇರುವುದಕ್ಕೆ ಅಯ್ಯಯ್ಯಪ್ಪ ಸ್ವಾಮಿಯ ಬಟ್ಟೆಯನ್ನು ಹಾಕಿಕೊಂಡು ಸಂಕ್ರಾಂತಿಯ ದಿನದಂದು ಶಭರಿಮಲೈನಲ್ಲಿ ಕಾಣುವ ಆತನ ಜ್ಯೋತಿ ನೋಡಿದರೆ ಸಾಕು ಎಲ್ಲವೂ ಒಳ್ಳೆಯದಾಗುತ್ತದೆ ಎಂದು ನಂಬಿಸಿದ್ದಾರೆ.

ಆದರೆ ಈ ಅಯ್ಯಯ್ಯಪ್ಪ ಸ್ವಾಮಿ ಹುಟ್ಟಿದ ಬಗೆ ಹೇಗೆ? ಆತನ ತಂದೆ - ತಾಯಿ ಯಾರು ? ಆತನ ವ್ಯಕ್ತಿತ್ವ ಎಂಥದ್ದು ? ಅದನ್ನು ಬೇರೆಯವರು ಅನುಕರಣ ಮಾಡಬಹುದೆ ? ಮಕರ ಸಂಕ್ರಮಣದಂದು ಶಬರಿಮಲೆಯಲ್ಲಿ ಕಂಡು ಬರುವ ಜ್ಯೋತಿ ನಿಜವಾಗಿಯೂ ಅಯ್ಯಪ್ಪಸ್ವಾಮಿಯ ಜ್ಯೋತಿಯೆ ? ಎಂದು ಅಪ್ಪಿತಪ್ಪಿಯೂ ಯೋಚಿಸುವುದಿಲ್ಲ.

ದೇವಾನು ದೇವತೆಗಳ ಒಂದೊಂದು ಕತೆ ಕೇಳುತ್ತ ಹೋದರೆ ಎಂಥ ಆಸ್ತಿಕನಿಗೂ ನಾಸ್ತಿಕ ಭಾವ ಉಂಟಾಗತೊಡಗುತ್ತದೆ. ನಾವು ಇಷ್ಟು ದಿನ ನಂಬಿಕೊಂಡು ಬಂದಿದ್ದ ವಿಚಾರಗಳ ಬಗೆಗೆ ನಮಗೆ ಕೀಳರಿಮೆ ಉಂಟಾಗತೊಡಗುತ್ತದೆ.

ದೇವತೆಗಳ ರಾಕ್ಷಸರ ಕಾಟ ಜಾಸ್ತಿಯಾದಾಗ ಅವರಿಂದ ಬಚಾವಾಗಲು ದೇವತೆಗಳು ಸಮುದ್ರವನ್ನು ಮಥಿಸಿ ಅಮೃತವನ್ನು ಪಡೆದು ಅದನ್ನು ಒಂದು ಪಾತ್ರೆಯಲ್ಲಿ ಬಚ್ಚಿಟ್ಟಿದ್ದರು. ಆ ಅಮೃತದ ಪಾತ್ರೆಯನ್ನು ಅಸುರರು ಕದ್ದೊಯ್ದರು. ದೇವತೆಗಳಿಗೆ ನಿರಾಶೆಯಾಯಿತು. ಸರ್ವಶಕ್ತನಾದ ಮಹಾವಿಷ್ಣು ತಾನು ಅಮೃತವನ್ನು ಹಿಂತಿರುಗಿ ತರುತ್ತೇನೆಂದು ಹೊರಟ. ಒಬ್ಬ ಸ್ಪುರದ್ರೂಪಿ ಮೋಹಿನಿ ರೂಪಧರಿಸಿ ದೈತ್ಯ ಲೋಕಕ್ಕೆ ಪ್ರವೇಶ ಮಾಡಿ ಹೇಗೋ ಅಮೃತವನ್ನು ತಂದೇ ಬಿಟ್ಟ !

ಕೂಡಲೇ ದೇವತೆಗಳು ಅದನ್ನು ಸೇವಿಸಲು ಮುಂದಾದರು. ವಿಷ್ಣು ಮೋಹಿನಿಯ ರೂಪದಲ್ಲಿಯೇ ಅವರಿಗೆ ಅಮೃತವನ್ನು ಬಡಿಸಲು ಆರಂಭಿಸಿದ. ಅಲ್ಲಿದ್ದ ಶಿವನಿಗೆ ಮೋಹಿನಿಯ ಅಪ್ರತಿಮ ಸೌಂದರ್ಯ -ಕಾಮೋದ್ರಿಕ್ತನಾಗುವಂತೆ ಮಾಡಿತು. ಉದ್ರೇಕ ತಾಳಲಾರದೆ ಶಿವ ಮಾರುವೇಷದ ವಿಷ್ಣುವನ್ನು ಭೋಗಿಸಿಯೇ ಬಿಟ್ಟ. ಇದರಿಂದ ಗರ್ಭಧರಿಸಿದ ವಿಷ್ಣು ತನ್ನ ತೊಡೆಯಿಂದ ಒಂದು ಮಗುವಿಗೆ ಜನ್ಮ ನೀಡಿದ.

# ಹಕೀಕತ್



ಸಲೀಂಗ ರತಿಯಿಂದ ಹುಟ್ಟಿದ ಆ ಮಗುವನ್ನು ಕೇರಳದ ಶಬರಿಮಲೈಯಲ್ಲಿ ಬಿಟ್ಟು ಹೋದರು. ಹೀಗೆ ಶಿವ- ವಿಷ್ಣುವಿನ ಅನೈತಿಕ ಪಿಂಡವೇ ಅಯ್ಯಯ್ಯಪ್ಪ ಸ್ವಾಮಿ ! ಈಗ ಸ್ವಾಮಿ ಶರಣಂ ಅಯ್ಯಪ್ಪನಾಗಿದ್ದಾನೆ.

ಹೀಗೆ ಶಿವ- ವಿಷ್ಣುವಿನ ಅನೈಸರ್ಗಿಕ ಕ್ರಿಯೆಯಿಂದ ಹುಟ್ಟಿದ, ನಮ್ಮ ಸಮಾಜದ ಕಣ್ಣಲ್ಲಿ ಅತ್ಯಂತ ಹೇಯವಾದ ಕೃತ ಎಸಗಿದಂತಿರುವ ಈ ಪಾಪದ ಪಿಂಡಕ್ಕೆ ನಾವು ನಡಕೊಳ್ಳಬೇಕೆ ? ಯಾವುದೆ ವ್ಯಕ್ತಿ – ಶಕ್ತಿ – ದೇವರೆಂದು ಭಾವಿಸಿದ್ದೇವೆಯೊ ಅದು ನಮ್ಮಲ್ಲಿ ಇಲ್ಲದ ,ನಮಗಿಂತಲೂ ಅತ್ಯಧಿಕವಾದ ಶಕ್ತಿ , ಯುಕ್ತಿ , ಜಾಣ್ಮೆ ಮುಂತಾದವು ಇರಬೇಕು ? ಇಂಥ ಯಾವ ಉನ್ನತ ಗುಣಗಳು ಈ ಅಯ್ಯಪ್ಪಸ್ವಾಮಿಯಲ್ಲಿ ಕಾಣುತ್ತೇವೆ ?

ಅಯ್ಯಪ್ಪಸ್ವಾಮಿಗೂ ಹೆಣ್ಣು ಮಕ್ಕಳಿಗೂ ಎಣ್ಣೆ ಸೀಗೆಯ ಕಾಯಿಯ ಸಂಬಂಧವಿದೆ. ಕೆಲವು ವರ್ಷಗಳ ಹಿಂದೆ ಚಿತ್ರನಟಿ ಜಯಮಾಲಾ ಅಯ್ಯಪ್ಪಸ್ವಾಮಿಯ ಗುಡಿಯಲ್ಲಿ ಹೋಗಿ ನಮಸ್ಕರಿಸಿ ಬಂದಿದ್ದೇನೆ ಎಂಬ ಸಂಗತಿಯೆ ಬಹು ದೊಡ್ಡ ಚರ್ಚೆಗೆ ಗ್ರಾಸ ಒದಗಿಸಿತ್ತು. ಹೆಣ್ಣಿಂದ ಹುಟ್ಟಿಲ್ಲದ ಈ ಅಯ್ಯಯ್ಯಪ್ಪ ಸ್ವಾಮಿ , ಹೆಣ್ಣನ್ನು ತಿರಸ್ಕರಿಸುವುದು ಸಹಜವೆ ಇದೆ.

ಆದರೆ ಹೆಣ್ಣು ಗಂಡುಗಳ ಸಂಪರ್ಕದಿಂದ ಹುಟ್ಟಿರುವ ಇಂದಿನ ಬಹುತೇಕ ಯುವಕರು ಅಯ್ಯಯ್ಯಪ್ಪ ಸ್ವಾಮಿಯ ಕರಿಬಟ್ಟೆ ಧರಿಸಿಕೊಂಡು ಓಡಾಡುವುದು ಯಾವ ಪುರುಷಾರ್ಥಕ್ಕೊ ? ಅಥವಾ ಆತನಿಂದ ಎಂಥ ಆದರ್ಶಗಳನ್ನು ಕಲಿಯಲಿಕ್ಕೊ ? ತಿಳಿಯುತ್ತಿಲ್ಲ.

ಕೇರಳ ಸರಕಾರಕ್ಕೆ ಅಯ್ಯಯ್ಯಪ್ಪ ಸ್ವಾಮಿ ಕಾರಣದಿಂದ ಅಲ್ಲಿನ ಪ್ರವಾಸೋದ್ಯಮ ವರ್ಷದಿಂದ ವರ್ಷಕ್ಕೆ ಗಣನೀಯ ಪ್ರಮಾಣದಲ್ಲಿ ಬೆಳೆಯುತ್ತಿದೆ. ಸರಕಾರಕ್ಕೆ ಸಾವಿರಾರು ಕೋಟಿ ರೂಪಾಯಿಗಳ ಆದಾಯವಿದೆ. ಹಾಗಾಗಿ ಕೇರಳದಲ್ಲಿ ಯಾವುದೇ ಸರಕಾರ ಬಂದರೂ ಅಯ್ಯಪ್ಪ ಸ್ವಾಮಿ ಜ್ಯೋತಿಯ ರೂಪದಲ್ಲಿ ಕಾಣುತ್ತಾನೆಂದು ಜನಸಾಮಾನ್ಯರಿಗೆ ಮೋಸ ಮಾಡಿ ಅಯ್ಯಪ್ಪ ಸ್ವಾಮಿಯ ಗುಡಿಗೆ ಬಹು ಅಂತರ ಇರುವ ಪ್ರದೇಶ ಒಂದರಿಂದ ಗುಪ್ತವಾಗಿ ಜ್ಯೋತಿ ಪ್ರಕಾಶಿಸುವಂತೆ ವೈಜ್ಞಾನಿಕ ಸಲಕರಣೆಗಳನ್ನು ಉಪಯೋಗಿಸುತ್ತಿದ್ದಾರೆ. ಇದು ಬಹುತೇಕರಿಗೆ ಗೊತ್ತಿರುವ ಸತ್ಯವಾಗಿದೆ.

ಆದರೆ ಸತ್ಯವನ್ನು ತಿಳಿದುಕೊಂಡು– ಬದಲಾಗಬೇಕು ಎಂಬ ಮುಕ್ತ ಮನಸ್ಸು ನಮ್ಮ ಇಂದಿನ ಎಷ್ಟು ಜನ ಯುವಕರಿಗೆ ಇದೆ ? ಎಂಬುದೆ ಸಧ್ಯದ ಪ್ರಶ್ನೆಯಾಗಿದೆ !

○ ಸಂಗ್ರಹ ಗುರು ಹುರಜುರ



# ನಿನಗಾಗಿ ತಹತಹಿಸುವ ಮನಸ್ಸು

ನನ್ನ ಪ್ರೀತಿಯ ಹುಡುಗ

ನನ್ನ ಕೈಯ ಹಿಡಿದಾಕಿ ಅಳುನುಂಗಿ ನಗು ಒಮ್ಮೆ
ನಾನೂನೂ ನಕ್ಕೇನ ! ಇಲದಿರಕ ನಿನ್ನ ಅಳುವ ಹುಚ್ಚು
ಹಳ್ಳದ ಕಳ್ಳ ಹುದುಲಾಗ ಸಿಕ್ಕೇನ.... ! ?

ಎಂಬ ಕವಿ ಬೇಂದ್ರೆಯವರ ಕವಿತೆಯ ಸಾಲು ಓದುತ್ತಿರುವಂತೆ ಅದೇಕೋ ನಮ್ಮ ಮುಂದಿನ ಕನಸುಗಳ ಬಗೆಗೆ ನನ್ನ ಮನಸ್ಸು ವಾಲಿಬಿಟ್ಟಿತು. ಬಹುಶಃ ನಾನು – ನೀನು ಪರಸ್ಪರ ಪೂರಕವಾಗಿ ಬದುಕದೆ ಹೋದರೆ ನಮ್ಮದೂ ಇಂಥ ಫಜೀತಿಯದೆ ಬದುಕಾಗಬಹುದಲ್ಲ ?

ಆದರೆ ನಾವಿಬ್ಬರೂ ಹೀಗಲ್ಲವೆ , ಅಲ್ಲ ?

ನನ್ನೆದೆಯ ಅಂಗಳದಲ್ಲಿ ನೀ ಬಿಡಿಸಿದ ಚಿತ್ರ ಚಿತ್ತಾರದ ರಂಗವಲ್ಲಿಗೆ ಜೀವ ತುಂಬುವವ ನೀ. ಭಾಷ್ಯ ಬರೆಯುವವನೂ ನೀ. ನಮ್ಮ ಬದುಕಿನ ಕಾವ್ಯಕ್ಕೆ ಬಣ್ಣ ಕಟ್ಟುವವನೂ ನೀನೆ. ಈಗಾಗಲೆ ನನ್ನ ಕಣ್ಣ ಕನ್ನಡಿಯಲ್ಲಿ ನಿನ್ನ ಬಿಂಬವನ್ನೆ ಇಟ್ಟುಕೊಂಡಿದ್ದೇನೆ. ಅದು ಸಾಕಾರವಾಗುವ ದಿನಗಳಿಗಾಗಿ ಹಂಬಲಿಸುತ್ತಿದ್ದೇನೆ.

ಬಡತನ ಒಡೆತನ ಕಡೆತನಕ ಉಳದಾವೇನಾ ? ಎದೆ ಹಿಗ್ಗು ಕಡೆ ಮಟ್ಟ. ಬಾಳಿನ ಕಡಲಾಗ ಅದನ ಮುಳುಗಿಸಬ್ಯಾಡ. ಕಡೆಗೋಲ ಹಿಡಿ ಹುಟ್ಟ ಎಂಬಂತೆ ನಾನು – ನೀನು ಬದುಕಿನ ತುಂಬ ಪ್ರೀತಿಯನ್ನೆ ಹರಡಿಕೊಂಡು ಜೀವಿಸೋಣ. ಈ ಮೂಲಕ ಬದುಕನ್ನು ಸಂಪೂರ್ಣ ಉಪಯೋಗಿಸಿಕೊಳ್ಳೋಣ.

ಮುಂತಾಗಿ ಯೋಚಿಸುತ್ತಿರುವಾಗ ನನ್ನಷ್ಟಕ್ಕೆ ನಾನು ಎಷ್ಟೋ ಬಾರಿ ನಕ್ಕಿದ್ದೇನೆ. ನನ್ನ ಕೆಲಸಗಳಲ್ಲಿ ನಾನು ಮುಳುಗಿ ಹೋಗಿದ್ದರೂ ಆ ಬಿಡುವಿರದ ಕೆಲಸಗಳ ಫೈಲ್‌ಗಳ ನಡುವೆಯೂ ನೀ ನೆನಪಾಗುತ್ತಿ. ಕಚಗುಳಿ ಇಡುತ್ತಿ. ಕನಸುಗಳನ್ನು ಕಟ್ಟಲು ಪ್ರೇರೇಪಿಸುತ್ತಿ. ಒಂದು ಕ್ಷಣ ಎಲ್ಲಾ ಮರೆತು ನಿನ್ನನ್ನೆ ಬೆನ್ನು ಹತ್ತಿ ಬಿಡುತ್ತೇನೆ. ಇದೆಂಥ ವ್ಯಾಮೋಹ.

ನಿನ್ನ ಮೋಹದ ಮುರುಳಿ ನನ್ನ ಮನಸ್ಸಿನಲ್ಲಿ ಭದ್ರವಾಗಿ ಕಾಡುತ್ತಲೆ ಇದೆ. ದಿನೆ ದಿನೇ ಅದು ಇನ್ನಷ್ಟು ಮತ್ತಷ್ಟು ಚಿಗುರಿಕೊಳ್ಳುತ್ತಿದೆ. ಈ ರಿಂಗುಣ ಹೆಚ್ಚುತ್ತಾ ಹೋಗುತ್ತಿರುವಂತೆ ನಿನ್ನ ಸಾಂಗತ್ಯ ನನಗೆ ಬೇಕೆ ಬೇಕು ಎಂಬ ವಾಂಛೆ ಹುಟ್ಟಿಕೊಳ್ಳುತ್ತಿದೆ.

ನಿನ್ನ ಸಾಮಿಪ್ಯದ ಸಾಂಗತ್ಯಕ್ಕೆ ಮನಸ್ಸು ತಹತಹಿಸುತ್ತಿದೆ. ನಿನ್ನ ಭಾವಕೋಶಗಳಲ್ಲಿ ಜೊತೆಯಾದಂತೆ – ನಿನ್ನ ದೇಹದಲ್ಲಿ ನನ್ನ ದೇಹವನ್ನು ಕಳೆದುಕೊಳ್ಳುವ ಅದಮ್ಯವಾದ ಬಯಕೆ ಕಾಡುತ್ತಿದೆ. ನೀ ಯಾವಾಗ ಬರುತ್ತೀ....... ?

o ಕನಸು

ಕುಣಿಯೋಣ ಬಾ



## ಕವಡೆ ಕಾಯಿ

# ಜ್ಯೋತಿಷಿಗಳು ಮತ್ತೆ ಚಿಗುರಲು ಕಾರಣವೇನು ?



o ದೇವಿಂದ್ರಪ್ಪ ದೇವದುರ್ಗ
ಬಿಜೆಪಿಯ ಚಡ್ಡಿ ಮನುಷ್ಯನ ಚಡ್ಡಿಯನ್ನು ಮತದಾರ ಮತ್ತೆ ಉಡಿಸಲು ಕಾರಣ ?
ಅದೆಲ್ಲ ಬಾಡಿ, ಕಾಚಾಗಳನ್ನು ಕಿತ್ತೇಸೆದುಹೋಗುತ್ತಿರುವವರ ಪ್ರಭಾವ.

o ಚಂದ್ರಶೇಖರ ಎಂ. ಸುರಪುರ
ನವಸ್ ಶಾಸಕರೂ ಈಗ ಕರುಡೋಪತಿಗಳಾಗುತ್ತಿರುವ ಕಾರಣವೇನು ?
ನಿಮ್ಮಂಥ ಮತದಾರರೆಲ್ಲ ಬುದ್ದುಗಳಾದ್ದರಿಂದ

o ಶೇಖರ ಚಂದ್ರಣ್ಣ ಜೇವರ್ಗಿ
ಬಾಂಬ್ ಬ್ಲಾಸ್ಟ ಮಾಡಿದ ಕಮಂಗಿ ಭಯೋತ್ಪಾದಕರು ಅನೇಕ ವೇಳೆ ಮುಸ್ಲಿಂಮರೆ ಏಕಾಗಿರುತ್ತಾರೆ. ?
ಅನಕ್ಷರತೆ , ಬಡತನ, ಜೊತೆಗೆ ಮತೀಯವಾದಿಗಳ ಸಖ್ಯ !

o ಸುರೇಶ ಚಂದ್ರಶೇಖರ ಸುರಪುರ
ಜ್ಯೋತಿಷಿಗಳು ಇತ್ತೀಚೆಗೆ ಮತ್ತೆ ಚಿಗುರುತ್ತಿರಲು ಕಾರಣವೇನು ?
ಚಡ್ಡಿಗಳ ಸರಕಾರದಲ್ಲಿ ಹುಲ್ಲು ಚಿಗುರದೆ ಬೆಳೆ ಚಿಗುರಲು ಎಂದಾದರೂ ಸಾಧ್ಯವೆಂದು ನೀವು ಅದು ಹೇಗೆ ಭಾವಿಸಿದ್ದೀರಿ ?

o ಎಂ.ಆರ್.ಪಾಟೀಲ ಯಾದಗಿರ
ಬಿ.ಜೆ.ಪಿ. ಸರಕಾರ ಸಂಪೂರ್ಣ ಬ್ರಾಹ್ಮಣರ ಪಕ್ಷವೆ ?
ಸಧ್ಯ ಪಾರ್ಟಿಯಲ್ಲಿರುವ ಎಲ್ಲರೂ ಚಡ್ಡಿ ತೊಟ್ಟುಕೊಂಡು ಕವಾಯತು ಮಾಡುತ್ತಿರುವುದರಿಂದ ಈ ಅನುಮಾನ

o ವೀಣಾಕುಲ್ಕರ್ಣಿ ರಾಯಚೂರು
ಯಡ್ಡಿಗೂ ಡಾಕ್ಟರೇಟ್ ?
ಯಡ್ಡೆಡ್ಡು ಮಾತಾಡಿದ್ದಕ್ಕೆ ಚಡ್ಡಿ ಒಳಗಡೆ ಆತು ಕುಳಿತಿದ್ದಕ್ಕೆ ಇರಬೇಕು !

o ಗುರುರಾಜ ಟಿ.ಶಹಾಪುರ
ಪಟ್ಟಣದ ನೆಲ– ಕಟ್ಟಡಗಳಿಗೆಲ್ಲ ಚಿನ್ನದ ಬೆಲೆ ಬರುತ್ತಿರಲು ಕಾರಣವೇನು , ಗುರು ?
ದುಡಿಯದೆ ಬಂದ ದುಡ್ಡಿನ ಗಮ್ಮತ್ತು !

# ಬರೆದಂತೆ ಬದುಕಿದ ಮಹಾಕವಿ ಕುವೆಂಪು !

– ಕೋ.ಚೆನ್ನಬಸವಪ್ಪ ಬೆಂಗಳೂರು



೧೯೩೪ ರಷ್ಟು ಹಿಂದೆ ಬರೆದಿದ್ದ ಈ ಕವಿತೆ ಮತ್ತು ಜಲಗಾರ ಈ ನಾಟಕದ ಸಂವಾದದಲ್ಲಿ ಯಾವ ಪೂಜಾರಿಯಾಗಲಿ , ಯಾವ ದೇವಸ್ಥಾನವಾಗಲಿ ಅವರೇ ನಿಮ್ಮನ್ನೇನೂ ಕರೆಯುವುದಿಲ್ಲ. ನೀವೇ ಹೋಗಿ ಕರೆದು ಅವರ ಕಾಲಿಗೆ ಬಿದ್ದು ನಮಸ್ಕಾರ ಮಾಡಿ ನಿಮ್ಮ ಬೆಲೆಯನ್ನೇ ತೆತ್ತು ಬರುತ್ತೀರಿ.... ಆದ್ದರಿಂದ ನಮ್ಮ ಯುವಕ ವರ್ಗ ಮಾಡಬೇಕಾದ್ದು ಏನೆಂದರೆ ಅವರು ಆಲೋಚನಾಪರರಾಗಬೇಕು. ಅವರಿಗೆ ಸ್ವತಂತ್ರ ವಿಚಾರವನ್ನು ಕೊಡಬೇಕಾಗುತ್ತದೆ. ಅವರು ಬರೆದ ಕವಿತೆಯಲ್ಲಿ ಮತ್ತೊಂದು ಮುಖ್ಯ ಮಾತಿದೆ :

"ಮೌಢ್ಯತೆಂಯು ಮಾರಿಯುನು ಹೊರದೂಡಬನ್ನಿ
ವಿಜ್ಞಾನದೀವಿಗೆಯ ಹಿಡಿಯಬನ್ನಿ !"

ಮೌಢ್ಯವೆಂಬ ಕತ್ತಲೆಯನ್ನು ಓಡಿಸಬೇಕಾದರೆ ವಿಜ್ಞಾನ ದೀವಿಗೆಯೆ ಬೇಕು. ವಿಜ್ಞಾನ ಎಂದರೆ ವಿಚಾರವಂತಿಕೆ, ವೈಚಾರಿಕತೆ ಇರುವಲ್ಲಿ ಮೌಢ್ಯವಿಲ್ಲ. ಮೌಢ್ಯ ಇರುವಲ್ಲಿ ವೈಚಾರಿಕತೆಯಿಲ್ಲ. ಎಲ್ಲಿ ವೈಚಾರಿಕತೆ ಇಲ್ಲವೋ ಅಲ್ಲಿ ಯಾವ ಬಗೆಯ ಪ್ರಗತಿಯೂ ಇಲ್ಲ. ನಿಂತ ನೀರಿನಂತೆ ಆ ಜನ ಆ ಸಮಾಜ ಆ ದೇಶ ಹೊಲಸೆದ್ದು ನಾರುತ್ತದೆ. ಯಾವ ಪ್ರಗತಿಯೂ ಸಾಧ್ಯವಿಲ್ಲ.

"ಆ ಮತದ ಈ ಮತದ ಹಳೆ ಮತದ ಸಹವಾಸ
ಸಾಕಿನ್ನು ಸೇರಿರೈ ಮನುಜ ಮತಕೆ" – ಎಂದು ಕರೆಕೊಡುತ್ತಾರೆ. ಮೌಢ್ಯದ ತಾಯಿ ಬೇರು ಮತೀಯ ಭಾವನೆ ಎಂಬುದು ಕವಿಯ ಇಂಗಿತ. ಮತಕ್ಕೂ ಧರ್ಮಕ್ಕೂ ವ್ಯತ್ಯಾಸವಿದೆ. ಮತ ಒಂದು ಅಭಿಪ್ರಾಯ. ಅಭಿಪ್ರಾಯ ಎಲರದೂ ಒಂದೇ ಆಗಿರಬೇಕಿಲ್ಲ. ಎಲ್ಲರಿಗೂ ಒಪ್ಪಿಗೆಯಾಗಿರಬೇಕಿಲ್ಲ. ಆದರೆ ಧರ್ಮ ಹಾಗಲ್ಲ.

ಪೂಜಾರಿ ಪುರೋಹಿತರ ವರ್ಗದ ಅವೈಚಾರಿಕತೆ, ಅವೈಜ್ಞಾನಿಕತೆಯನ್ನು ಎತ್ತಿ ತೋರಿಸುವ ಅವರ ಕವಿತೆಗಳಷ್ಟನ್ನೆ ಸಂಗ್ರಹಿಸಿದರೂ ಒಂದು ಹೊತ್ತಿಗೆ ಆದೀತು. ಅಂಥ ಅವರ ಕವಿತೆಗಳಲ್ಲಿ 'ಧ್ರಾಂ ಧ್ರೀಂ ಧ್ರೂಂ' ಕವಿತೆ ಒಂದು. ಘಜನ ಮಹಮದ ಸೋಮನಾಥ ದೇವಾಲಯಕ್ಕೆ ಮುತ್ತಿಗೆ ಹಾಕಿ ಅಪಾರ ಐಶ್ವರ್ಯವನ್ನು ಲೂಟಿ ಮಾಡಿದ ಐತಿಹಾಸಿಕ ಘಟನೆಯನ್ನು ವಸ್ತುವಾಗಿಟ್ಟುಕೊಂಡು ಕುವೆಂಪು ವೈದಿಕ ಧರ್ಮದ ಯುಕ್ತಿಯ ಪುರೋಹಿತ ವರ್ಗದ, ಭಕ್ತಿಯ , ಸುಧಾಕರ ಮೌಳಿಯ ಶಕ್ತಿಯನ್ನು ಕುರಿತು ಧ್ರಾಂ ಧ್ರೀ ಧ್ರೂಂ ಕವಿತೆಯಲ್ಲಿ ಗೇಲಿ ಮಾಡುತ್ತಾರೆ.

೨೬ ನೇ ಪುಟಕ್ಕೆ

# ನಾನು ಕವಿಯಾದದ್ದು ಹೇಗೆ ?

ನಾನು ಗ್ರಾಮೀಣ ಪರಿಸರದಿಂದ ಬಂದಂತಹ ಹೆಣ್ಣು ಮಗಳು.ಬಾಲ್ಯದಲ್ಲಿ ನಾವು ಹಬ್ಬ ಹುಣ್ಣಿಮೆಗಳಲ್ಲಿ ಜಾನಪದ ಹಾಡುಗಳನ್ನು ವಿಫುಲವಾಗಿ ಕೇಳುವಂತಹ ಅವಕಾಸ ಇತ್ತು. ಹಬ್ಬ ಹರಿದಿನಗಳು ಹಾಡುಗಳ ಮೇಲೆ ನಿಮತತ್ತು. ಆಚರಣೆ ಎಂದರೆ ಹಬ್ಬಗಳು. ಹೀಗಾಗಿ ಹಾಡಿನ ಗೇಯತೆ ಎನ್ನುವುದು ನನ್ನಲ್ಲಿ ಲಯುವನ್ನು ಕವಿತೆಯು ಸ್ಥಾಯಿ- ಭಾವವನ್ನು ಉಂಟುಮಾಡಿತ್ತು ಎಂದು ಹೇಳಬಹುದು.

೧೯೭೫ ರಲ್ಲಿ ನನ್ನ ಕವಿತೆ ತುಷಾರದಲ್ಲಿ ಪ್ರಕಟವಾದ ಮೇಲೆ ಮುಂದೆ ನನ್ನ ಕವಿತೆಗಳು ಪ್ರಕಟವಾಗುವುದಕ್ಕೆ ಪ್ರಾರಂಭವಾದವು. ಮೊದಲನೇ ಕವಿತೆಯ ಆಸಯ ಒಂದು ಸ್ವಾಭಿಮಾನಿ ವ್ಯಕ್ತಿತ್ವದ ಮೇಲೆ ನಡೆಯುವ ಅಧಿಕಾರಸ್ಥರ ದಬ್ಬಾಳಿಕೆಯನ್ನು ವಿರೋಧಿಸುವ ಮನೋಭಾವ. ಈ ಆಕ್ರೋಶಗಳು ವಿಸ್ತರಣೆಗೊಂಡು ಅನೇಕ ಕ್ಷೇತ್ರದಲ್ಲಿ ನಂತರ ಕೆಲಸ ಮಾಡಿದವು. ಅವೆಲ್ಲವೂ ನನ್ನಲ್ಲಿ ಪ್ರಟವಾಗಿವೆ.

ಮೊಟ್ಟ ಮೊದಲು ನಾನು ಎಲ್ಲರಂತೆ ಪ್ರೇಮಕವಿತೆ ಬರೆದರೂ ಆಮೇಲೆ ದಾಂಪತ್ಯ ಗೀತೆ ಬರೆದೆ. ನಿಜವಾಗಿ ನನ್ನ ಕವಿತೆಗೆ ಸ್ಫೂರ್ತಿ ಯಾರೆಂದರೆ ಆರ್ಥರು, ರೋಗಿಗಳು, ಅಂಗವಿಕಲರು, ಬಡವರು, ಶೋಷಿತ ಸ್ತ್ರೀಯರು, ಇವರೆಲ್ಲರ ಮೇಲೆ ಹೆಚ್ಚು ಪ್ರೀತಿಯನ್ನು ಗೌರವವನ್ನು ಇಟ್ಟು ನಾನು ಕೂಡ ಅವರೊಂದಿಗೆ ಬೆಳೆದು ಬಂದವಳು.

ನನ್ನ ಕಾವ್ಯದ ಕೇಂದ್ರಶಕ್ತಿ ಜೀವನಶ್ರದ್ಧೆ, ಜೀವನೋಲ್ಲಾಸ, ಜೀವನ ಪ್ರೀತಿಗಳು. ಜತೆಗೆ ಕುವೆಂಪು,ಬೇಂದ್ರೆ, ಜಿ.ಎಸ್.ಎಸ್.ಡಿ.ವಿ.ಜಿ., ವಚನಕಾರರು, ಸೂಫಿ ಸಂತರು, ಪರ್ಷಿಯನ್ ಕವಿ ಉಮರ್ರ ಖಯಾಮ್, ಕಲೀಲ್‌ಗಿಬ್ರಾನ್ ಇವರೆಲ್ಲರು ನನ್ನ ಒಳಗೆ ಆರ್ಥರ ಕುರಿತಾದ , ಬಾಯಿ ಇಲ್ಲದವರ ಬಿನ್ನಹಕ್ಕೆ ಬಾಯಿಯಾಗುವಂತೆ ನನ್ನನ್ನು ಪ್ರೇರೇಪಿಸಿದವರು.

ಖಲೀಲ ಗಿಬ್ರಾನ್ ಒಂದು ಕಡೆ ಹೇಳುತ್ತಾನೆ. ಈ ಜಗತ್ತಿನ ಯಾವ ನೋವಿಗೂ ಮದ್ದಿಲ್ಲ. ಅದು ಇದ್ದರೆ ಕವಿತೆ ಮಾತ್ರ. ಎಲ್ಲ ಸಂತೋಷಗಳಿಗೆ ಕಾರಣ ಹಾಗೂ ಎಲ್ಲಾ ನೋವುಗಳಿಗೆ ಮದ್ದು ಕವಿತೆಯೊಂದೆ. ಕವಿತೆಯಿಂದ ಕವಿತೆಗೆ ನಾವು ಕೊಟ್ಟು ತಗೊಳ್ಳುವುದನ್ನು ಮಾಡಬಹುದು ಅಂತ. ಹಾಗೆ ನಾನು ಕೂಡ ಸೀತೆಯನ್ನು ಹುಡುಕಿ ಹೊರಟವಳು ನನ್ನ ಕವಿತೆಯ ಗುರಿ ಕೂಡ ಅದೇನೆ. ಅಕ್ಷರಗಳು ಗಾಯಗೊಂಡ ಆತ್ಮದ ಹನಿಗಳು, ನೆತ್ತರಲ್ಲಿ ನೆನೆದುಕೊಂಡ ನುಚ್ಚು ನೂರು ಹೃದಯ ಕಂಬನಿಗಳು ಅಂತ . ಇದು ನನ್ನ ಕವಿತೆಗಳ ಆಶಯ. ಎಲ್ಲಾ ದುಃಖಿತರ , ಆರ್ತರ ಮತ್ತು ಯಾವುದೇ ಒಂದು ವಿಷಯ ಹೇಳುವುದಾದರೂ ಕವಿತೆ ಮಾತ್ರ ಸಾಲದು ಎಂದು ನನ್ನ ಅಭಿಪ್ರಾಯ.

o ಶ್ರೀಮತಿ ಶಶಿಕಲಾವೀರಯ್ಯಸ್ವಾಮಿ

ಕತೆ

# ಅಜ್ಞಾನವೆಂಬ ತೊಟ್ಟಿಲೊಳಗೆ...

ತಣ್ಣಗೆ ಕೊರೆಯುವ ಡಿಸೆಂಬರ್‌ನ ಚಳಿಯ ದಿನಗಳಲ್ಲೂ ಬರೀ ಬನಿಯನ್ ಲುಂಗಿ ತೊಟ್ಟು , ಹೀರೋ ಹೊಂಡಾ ಗಾಡಿಯ ಮೇಲೇರಿ ಬರ್ರನೆ ಭೀಮರಾಯನ ಗುಡಿಯ ಕಡೆ ಹೊರಟ ಶಿವಶರಣಪ್ಪ , ಶಂಬಣ್ಣ , ಶಿವಣ್ಣ , ಸಿದ್ಧರಾಮ ಮುಂತಾದವರು ಕಂಡಾಗ ನನಗೆ ಆಶ್ಚರ್ಯವಾಗಲೇ ಇಲ್ಲ . ಏಕೆಂದರೆ ಇವರು ದಿನಂ ಪ್ರತಿ ಮುಂಜಾನೆ ಜಳಕ ಮಾಡುತ್ತಲೇ ಮೂರು ಬೊಟ್ಟು ವಿಭೂತಿ ಧರಿಸಿ , ಊದು ಬತ್ತಿ, ಕಾಯಿ - ಕರ್ಪೂರ, ಹಿಡಕೊಂಡು ಅದೇ ಮಡಿಯಿಂದ ದೇವರ ಗುಡಿಗಳಿಗೆ ಸುತ್ತಾಗಿ ಬರುವುದು ಅನುಗಾಲದಿಂದಲೂ ಬಂದ ರೂಢಿ. ಆದರೆ ಈ ದೈವಭಕ್ತರೇ ಅಲ್ಲದೆ ಕೆಲವರು ಲಗು - ಬಗೆಯಿಂದ ಭೀ-ಗುಡಿಯ ಕಡೆಗೆ ಹೊರಟಾಗ ನನಗೆ ಕುತೂಹಲವಾಗದೆ ಇರಲಿಲ್ಲ. ಗಡಬಡಿಸಿ ಹೋಗುತ್ತಿದ್ದ ಆಗಂತುಕನೋರ್ವನನ್ನು ತಡೆದು :

"ಯಾಕೆ ಎಲ್ಲರೂ ಭೀ-ಗುಡಿಯ ಕಡೆಗೇ ಹೊರಟಿದ್ದಾರಲ್ಲ ! ?" ಎಂದಾಗ , ಆತ :

" ಭೀ-ಗುಡ್ಯಾಗ ಶರಣಬಸ್ಸಪ್ಪ ಮುತ್ತ್ಯಾ ಹಾವಾಗಿ ಪ್ರತ್ಯಕ್ಷ್ಯ ಆಗ್ಯಾನಂತ ! ಎರಡೂ ಮೂರು ದಿನಗಳಿಂದಲೂ ಆ ಕುರುಬರ ಗಾಳೆಪ್ಪನ ಹೊಲದ ಬೇಳಿನ್ಯಾಗಿಂದ ಎಕಡಿಗೂ ಅಳ್ಯಾಡಲಾರದಂಗ್ಹ ಕುಂತಲ್ಲೇ ಕುಂತಾನಂತ !! ಭಕ್ತರು ಕೊಟ್ರ , ಹಾಲು ಕುಡಿತಾನಂತ !! ಯಾರಿಗೂ ಕಚ್ಚೋದಿರಲಿ, ಸಮೀಪ ಹೋದವ್ರಿಗೆ ಹೆಡೆ ಎತ್ತಿ ಆಶೀರ್ವಾದ ಬೇರೆ ಮಾಡ್ತಾನಂತ. ಇದನ್ನು ನೋಡುವ ಸೌಭಾಗ್ಯ ಯಾರಿಗೆ ಸಿಕ್ತಾದರ್ರೀ..... ? ಇದನ್ನೆಲ್ಲ ನೋಡ್ಲಾಕೂ ಪುಣ್ಯ ಮಾಡಿರಬೇಕು........" ಎಂದು ಒಂದೇ ಉಸುರಿನಲ್ಲಿ ಹೇಳಿ ನನ್ನ ಪ್ರತಿಕ್ರೀಯೆಗೂ ಕಾಯದೆ ಭೀ-ಗುಡಿಯ ಕಡೆಗೆ ಹೆಜ್ಜೆ ಹಾಕಿದ.

ಇದರಲ್ಲಿ ಏನೋ 'ಗಮ್ಮತ್ ' ಇದೆ ಎಂದು ನನ್ನಷ್ಟಕ್ಕೆ ನಾನು ಅಂದು ಕೊಳ್ಳುತ್ತಾ ಮನೆಗೆ ಬರುವಷ್ಟರಲ್ಲಿ ನಮ್ ಕಾಕ ಶರಣಪ್ಪ - ಚಿಕ್ಕಮ್ಮ ನೀಲಮ್ಮ ,ಅತ್ತಿ ಸಂಗಮ್ಮ , ಆಯಿ ಶಿವಮ್ಮ ಮನೆಯ ಎಲ್ಲೋರು ಹುಮ್ಮಸಿನಿಂದ ತಯಾರಾಗಿ ಎಲ್ಲಿಗೋ ಹೊರಟಿರುವಂತೆ ಕಂಡಿತು. ನನ್ನ ನೋಡುತ್ತಲೇ ಅಡಸಲಬಡಸಲ ಚಿಲಕ ಹಾಕಿ ಕೀಲಿ ಕೈ ಕೊಡುತ್ತ

" ಸ್ವಲ್ಪ ಹೊತ್ತು , ಮನಿ ಮುಂದ ಕುಂದ್ರು. ತಟಕ ಇಲ್ಲಿ ಹೋಗಿ ಬರ್ತೀವಿ. '' ಎಂದು ಚಪ್ಪಲಿಗಳನ್ನೂ ಹಾಕಿ ಕೊಳ್ಳದೇ ಕೈಯಲ್ಲಿ ಊದು ಬತ್ತಿ, ಕಾಯಿ , ಕರ್ಪೂರ ಹಿಡಕೊಂಡು ಹೊರಟಾಗ ಇವರೆಲ್ಲ ಎಲ್ಲಿಗೆ ಹೊರಟಿದ್ದಾರೆ ? ಎಂಬುದು ನಾನು ಊಹಿಸದೆ ಇರಲಿಲ್ಲ.

ಮನೆಯ ಮುಂದುಗಡೆಯ ಬಯಲ ಅಂಗಳದಲ್ಲಿ ಹಾಕಿದ ಹೊರಸಿನ ಮೇಲೆ ಮೈ ಉರುಳಿಸಿದೆ. ಗಾರ್ಡನಲ್ಲಿ ನಾಲ್ಕಾರು ವರ್ಷಗಳ ಹಿಂದೆ ಹಾಕಿದ್ದ ನೀಲಗಿರಿ ಗಿಡ ಆಗಲೇ ಸರಸರನೆ ಬೆಳೆದು ನಿಂತಿದೆ. ಪಪ್ಪಾಯಿಯಂತೂ ಹೂಬಿಟ್ಟು ಒಂದೆರಡು ಹಣ್ಣುಗಳನ್ನು ಕೊಟ್ಟಿದೆ. ಜಂಪಲ ಗಿಡದಲ್ಲಿ ಆಗಲೇ ಹಣ್ಣುಗಳು ತುಂಬಿ ನಿಂತಿವೆ. ನಾಲ್ಕಾರು ಗಿಳಿಗಳು ಅವನ್ನು ನಾ ತಿನ್ನಬೇಕು- ನೀ ತಿನ್ನಬೇಕು ಎಂಬ ವಾದವಿವಾದದಲ್ಲಿ ತೊಡಗಿವೆಯೇನೋ ಅನ್ನುವಂತೆ ಗಲಿಬಿಲಿ ಶಬ್ಧ ಮಾಡುತ್ತ ಪರಸ್ಪರ ಕಚ್ಚಾಡುತ್ತಿವೆ.ಮನೆಯ ಮತ್ತೊಂದು ಮಗ್ಗುಲಿಗೆ ಇರುವ ದನದ ಕೊಟ್ಟಿಗೆಯಲ್ಲಿ ದನಗಳು ಮೇಯುತ್ತಿರುವಂತಿದೆ. ಏಕೆಂದರೆ ಅವುಗಳ ಕೊರಳೊಳಗಿನ ಗಂಟೆಗಳು ಅಲುಗಾಡಿದ ಶಬ್ದ ಅಲೆ ಅಲೆಯಾಗಿ ಕೇಳಿಬರುತ್ತಿದೆ.

## ಕತೆ

ಗಂಟೆಗಳ ಶಬ್ಧ ರಿಂಗುಣಿತವಾಗುತ್ತಲೇ ನನಗೂ ನಮ್ಮ ಮುತ್ತ್ಯಾ ನೆನಪಾದ : ಹಾಗೆ ಕಣ್ಣಗಲಿಸಿ ತಿಳಿ ನೀಲಿಯಲ್ಲಿ ತಾ ನೀಲವಾಗಿ ಅವ ಹೋದ ದೂರ ನೋಡುತ್ತಿರುವಂತೆ ನೆನಪಿನ ಮೋಡಗಳು ಒಂದೊಂದೆ ಡಿಕ್ಕಿ ಹೊಡೆದವು. ನೆನಪಿನ ಮಳೆಯ ಮುಸಲಧಾರೆಗೆ ಮೈ ಕೊಡುವ ಸರದಿ ಮಾತ್ರ ನನಗೆ ಬಂತು.

ಇದೇ ಮನೆಯ ಜೇಳಿಂದ್ರದ ಬಲ ಮಗ್ಗಲಿಗೆ ಮುತ್ತಾ ಒಮ್ಮೆ ಒರಗಿ ಕೊಂಡು ಕುಂತಾಗ ತುಮಕೂರಿನ ಶರಣಬಸಪ್ಪ ಇದ್ದಕಿದ್ದಂತೆ ಬಂದನಂತೆ. ಆದಾಗಲೇ ದೈವಾಂಶ ಸಂಭೂತನೆಂದೆ ಹೆಸರಾಗಿದ್ದ , ಪುರಾಣ ಪ್ರವಚನಗಳ ಜ್ಞಾನವನ್ನು ಅರೆದು ಕುಡಿದಿದ್ದ , ಕಾಶಿಯಲ್ಲಿ ಕಲಿತು ಬಂದಿರುವ ವೇದಾಂತಿ ತಾನಾಗಿ ಮನೆಯ ಅಂಗಳಕ್ಕೆ ಬಂದುನಿಂತಾಗ ನನ್ನ ಮುತ್ತ್ಯಾನಿಗೆ ಆಕಾಶವೇ ಮೂರು ಗೇಣು ಎನ್ನುವಷ್ಟು ಖುಷಿ ಆಗಿತ್ತಂತೆ.

" ಏ....... ಗುರಪ್ಪ ನನಗ ಸಿಕಣೆ ಉಣ್ಣೋ ಆಸೆ ಆಗ್ಯಾದ.....ಮಾನಿ ಹಣ್ಣ ತರಿಸಿಬಿಡು..

ಎಂದು ಹೇಳುತ್ತ ಉತ್ತರಕ್ಕೂ ಕಾಯದೆ ಸರ ಸರನೆ ಹೊರಟು ಹೋದರಂತೆ.ನನ್ನ ಮುತ್ತ್ಯಾನಿಗಾದರೋ ಇದು ಪೀಕಲಾಟಕ್ಕೆ ಇಟ್ಟುಕೊಂಡಿತಂತೆ. ಸೀಜನ್ ಅಲ್ಲದ ಆ ದಿನಗಳಲ್ಲಿ ಮಾವಿನ ಹಣ್ಣನ್ನು ಎಲ್ಲಿಂದ ತರೋದು ? ಎಂದು ಚಿಂತಿಸುತ್ತಲೇ ನೆನಪಾದವರು: ಬೊಂಬಾಯಿಯಲ್ಲಿಯಲ್ಲಿರುವ ಮಲ್ಕಣ್ಣ. ಕೂಡಲೇ ಆತನಿರುವಲ್ಲಿಗೆ ಹೊಸ್ಮನಿ ಚಂದಪ್ಪನನ್ನು ಕಳಿಸಿ , ಶರಣಬಸಪ್ಪನಿಗೆ ಶೀಕರಣಿ ಮಾಡಿಸಲು ಮಾವಿನ ಹಣ್ಣುಗಳನ್ನು ತರಿಸಿದರಂತೆ.

ಮಡಪತಿ ಬಸ್ಸಯ್ಯನವರ ಮನೆಯ ಅಂಗಳದಲ್ಲಿ ಹಚ್ಚಿದ ಬಸವಣ್ಣನ ಪುರಾಣ ಶರಣಬಸಪ್ಪನವರು ಹೇಳುತ್ತಿದ್ದರೆ ಮೈಯೆಲ್ಲಾ ರೋಮಾಂಚನ.ಕಂಚಿನ ಕಂಠದ ಅವರ ಶಾರೀರದ ಧ್ವನಿ ಸ್ಪಟಿಕದ ಶಲಾಕೆ. ಇಂದಿನಂತೆ ಮೈಕುಗಳಿಲ್ಲದ ಆ ದಿನಗಳಲ್ಲಿ ಬಹಳಷ್ಟು ಜನ ತಮ್ಮ ಮನೆಯ ಅಂಗಳದಲ್ಲಿಯೇ ಮಲಗಿ ಪುರಾಣ ಕೇಳುತ್ತಿದ್ದರಂತೆ ! ವಾಗ್ಮಿ ಮೇಲಾಗಿ ವೇದಾಂತಿ ಬೇರೆ !!

ಅದೇನು ಕಾರಣವೋ ಒಮ್ಮೊಮ್ಮೆ ನಮ್ಮ ಮನೆಯ ಮಗ್ಗುಲಿಗೆ ಇರುವ ಗುರುಲಿಂಗಪ್ಪನ ಗುಡಿಯ ಲಿಂಗದ ಮೇಲೆಯೇ ಶರಣಬಸಪ್ಪ ಉಚ್ಚಿ ಹೋಯ್ಯುತ್ತಿದ್ದರಂತೆ ! ನಾಲ್ಕೆಂಟು ದಿನ ಯಾರಿಗೂ ಕಾಣದ ನಿಷ್ಠೆಯವರ ಹೊಲದ ಬಾವಿಯ ಮಗ್ಗುಲಲ್ಲಿರುವ ಖಾನಿಬಾವಿ ಎಂಬಲ್ಲಿ ಹೋಗಿ ಕುಳಿತು ಕೊಳ್ಳುತ್ತಿದ್ದರಂತೆ !! ಒಮ್ಮೆ ಥಳ ಥಳಿಸುವ ಬಟ್ಟೆ ಉಟ್ಟುಕೊಂಡಿದ್ದರೆ ಮಗದೊಮ್ಮೆ ದಶಾ ಬತ್ತಲೆಯಿಂದಲೇ ತಿರುಗುತ್ತಿದ್ದರಂತೆ. ಕೊನೆ ಕೊನೆಗೆ ಯಾರೂ ಇಲ್ಲದ ಏಕಾಂತ ಬಯಸಿ ಜನರಿಂದ ದೂರ ಇದ್ದರೆ ಜನರು ಅವರಿದ್ದಲ್ಲಗೇ ಹೋಗಿ ಮುಕುರಿ ಕೊಳ್ಳುತ್ತದ್ದರಂತೆ. ಆಗ ಸಿಟ್ಟಾಗಿ ಶರಣಬಸಪ್ಪನವರು

"ನನಗೇನು ಗಂಟು ಬಿದ್ದೀರೆಲೇ ಸೂ.... ಮಕ್ಳೇ..... ! ಇಲ್ಲಿಂದ ಹೋಗ್ತೀರೋ , ಇಲ್ಲೋ ? "

ಇಂಥ ಶರಣಬಸಪ್ಪನ ಸಂಸರ್ಗಕ್ಕೆ ಬಂದ ನಮ್ಮ ಮುತ್ತ್ಯಾ..... ಮೇಲಿನಂತೆಲ್ಲ ಹೇಳುತ್ತಿದ್ದರೆ ಜೇಳಿಂದ್ರದಲ್ಲಿ ಕುಳಿತಿರುತ್ತಿದ್ದ ನನ್ನ ಮೈಯೆಲ್ಲಾ ರೋಮಾಂಚನ.ಅನಿರ್ವಚನೀಯ ಆನಂದ ಉಂಟಾಗುತ್ತಿತ್ತು. ಇಂಥ ಶರಣ ಬಸಪ್ಪ ಲಿಂಗೈಕ್ಯರಾಗಿ ಆಗಲೇ ಐವತ್ತು ವರ್ಷಗಳು ಗತಿಸಿಹೋಗಿವೆ, ಎಂದು ಮುಂತಾಗಿ ನೆನಪಿಸುತ್ತ ಮಲಗಿರುವಂತೆ

" ಯಾಕೋ ಸಣ್ಣಪ್ಪ ನೀ ಇನ್ನಾ ಮನೆ ಕೀಲಿ ತೆಗೆಯದೇ ಹಾಗೇ ಹೊರಸಿನ ಮೇಲೆ ಮಲಗಿದ್ಯಲ್ಲ..... ! ನಿದ್ದಿ ಹತ್ಯಾದೇನು ? "

ಎಂದು ಆಯಿ ಶಿವಮ್ಮ ನುಡಿದಾಗ ವಾಸ್ತವ ಪ್ರಪಂಚಕ್ಕೆ ಇಳಿದು ಬಂದಿದ್ದೆ. ಹೊರಸಿನ ಮೇಲೆ ಮಲಗಿದ ಜಾಗದಲ್ಲೇ ಎದ್ದು ಕುಳಿತ ನನ್ನನ್ನು ನೋಡಿದ ಅತ್ತೆ ಸಂಗಮ್ಮ :

" ಏ....... ಸಣ್ಣಪ್ಪ , ಭೀ-ಗುಡಿ ಕಡಿಗಿ ನೀ ಹೋಗಿಬರಬಾರದಾ.... ಎಷ್ಟ ಜನ ? ಏನ ಕಥಿ. ಸಾವಿರಾರು ಜನ ಮುತ್ಯಾನ (ಹಾವು ) ದರ್ಶನಕ ಸಾಲುಗಟ್ಟಿ ನಿಂತಾರ. ಖರೇವಂದ್ರ ಹಾವು ಅಳಿಗ್ಯಾಡಲಾರದಂಗ್ನ ಕುಂತಕೊಂಡು ಏಳೆಂಟು ದಿನಾ ಆಯ್ತಂತ . ಆ ಹುತ್ತದ ಹತ್ತರನೇ ಕುಳಿತಿತ್ತಂತ. ನಾವು ಹೋದಾಗ ಅದೇ ಅಗ ಹುತ್ತದೊಳಕ್ಕೆ ಹೋಗಿದೆ ಅಂತದ್ರು. ನಾವೂನು ಕಾಯಿ ಒಡ್ದು , ಕರ್ಪೂರ ಊದುಬತ್ತಿ ಬೆಳಗಿ ಬಂದ್ವಿ. ಅ ಹುತ್ತದ ಸುತ್ತ ಹಾಕಿದ ದಕ್ಷಣ ಗುಂಪಿ – ಗುಂಪಿ ಆಗಿ ಬಿದ್ದಾವ. ದಿಗ್ಗಿಯ ಬಸ್ಸಯ್ಯ ಮುತ್ಯಾನೇ ಈಗ ಎಲ್ಲಾ ದೇಕರೇಕಿ ಮಾಡಾಕ ಹತ್ಯಾನ . ಪುಣ್ಯವಂತ !! "

ಎಂದು ಮಾತು ಮುಗಿಸಿದಳು. ಕಾಕ ಶರಣಪ್ಪ ಮಾತ್ರ, ನನ್ನ ಸಮೀಪ ಬಂದು :

" ಈ ಪವಾಡ ಪೇಪರನ್ಯಾಗ ಬರದ್ರ ನಿನಗ ಪುಣ್ಯ ಬರತಾದ. ನೀ ಗುರಪ್ಪ ಮುತ್ಯಾನ ಮೊಮ್ಮಗ ಆದದ್ದು ಸಾರ್ತಕ ಆಗತಾದ. : ದಡಾನ ಹೋಗಿ ಬಾ..... "

ನನಗೆ ಇವರ ಹುಚ್ಚು , ಮುಗ್ಧ ಕಲ್ಪನೆ ಕಂಡು ನಗಬೇಕೋ ? ಅಳಬೇಕೋ ? ಒಂದು ತೋಚದಾಯ್ತು. ಸುಮ್ಮನೆ ನನ್ನಷ್ಟಕ್ಕೆ ನಾನು ಮುಗುಳ್ನಕ್ಕು ಅಲ್ಲಿಂದ ಎದ್ದು , ಮನೆಯಲ್ಲಿ ಅಲ್ಮಾದಲ್ಲಿದ್ದ ಕ್ಯಾಮರಾ ತೆಗೆದುಕೊಂಡು , ನನ್ನ ಹೀರೋ ಹೋಂಡಾ ಗಾಡಿಯ ಕಿವಿ ಹಿಂಡುತ್ತ ಒಂದೇ ಉಸುರಿಗೆ ಊರಿನಿಂದ ಹೊರಬಂದೆ.

ಬಸ್ ಸ್ಟಾಂಡಿನಲ್ಲಿ ಜನ ಗುಂಪು ಗುಂಪಾಗಿ ನಿಂತು ಅದೇ ಮಾತಾಡುತ್ತಿತ್ತು. ಒಬ್ಬ ಮತ್ತೊಬ್ಬಗ ಹೇಳತ್ತಿದ್ದ :

" ಶಾಣಬಸಪ್ಪನ ಮಠಕ್ಕ ಬಂದ ಸ್ವಾಮಿಗಳು ಮೊನ್ನಿ ಅಮಾಸಿದಿನ ಹೇಳಿದ್ರಂತ. ತ್ವಾಡೆ ದಿನದಾಗ ಶರಣಬಸಪ್ಪ ನಿಮ್ಮೂರ ಹೊಲದಾಗ ಹಾವಾಗಿ ಕಾಣಿಸಿಕೊಳ್ತಾನಂತ , ಎಷ್ಟು ಖರೆ ಆಯ್ತಲ್ರೀ...... ಇಂಥ ಕಲಿಕಾಲದಾಗೂ ಎಂಥ ಮಹಿಮರೂ....."

ಎಂದು ಬೆರಗಾಗಿ ಹೇಳುತ್ತಿದ್ದ.ಕೇಳುವವರೂ ಅಷ್ಟೇ ಗಾಭರಿ ಭಯದಿಂದ ಆಲಿಸುತ್ತ ಭೀ-ಗುಡಿಯತ್ತ ದೌಡು ಹಾಕಲು ಅವಸರಿಸತೊಡಗಿದರು. ಬಸ್ ಗಳು , ಟೆಂಪೋ, ಟಂಟಂ ,ಆಟೋ ಮುಂತಾದವು ಎಲ್ಲವೂ ನೇರ ಶರಣಬಸಪ್ಪ ಹಾವಾಗಿ ಪ್ರತ್ಯಕ್ಷನಾದ ಅ ಕುರುಬರ ಘಾಳೆಪ್ಪನ ಹೊಲದತ್ತಲೇ ಮುಖ ಮಾಡಿ ಹೊರಟಿದ್ದವು.

ಇಲ್ಲೇನೋ ಖರಾಮತ್ತು ಇರಬೇಕು ಎಂದು ನನ್ನೊಳಗೆ ಅಂದುಕೊಳ್ಳುತ್ತಾ ಮತ್ತೇ ನನ್ನ ಬೈಕಿನ ಎಕ್ಸಲೀಟರ್ ಒತ್ತಿದೆ. ಎಲ್ಲಿ ನೋಡಿದರೂ ಅಲ್ಲೆಲ್ಲ ಜನವೋ ಜನ. ಇರುವೆಯಂತೆ ಸಾಲು ಹಿಡಿದು ಹೊರಟಿತ್ತು. ಪುಢಾರಿಗಳು – ಮರಿ ಪುಢಾರಿಗಳು ಆಗಲೇ ತಮ್ಮ ಲಕ್ಸುರಿ ವಾಹನದಲ್ಲಿ ಮನೆಯ ಮಂದಿಯನ್ನೆಲ್ಲ ಕೂಡಿಸಿಕೊಂಡು ದರ್ಶನಪಡೆದು ಬರಲು ಹೊರಟಿದ್ದರು. ಅಲ್ಲಿ ಹೋಗಿ ನೋಡುತ್ತೇನೆ, ಟೆಂಗಿನ ಕಾಯಿಗಳನ್ನು ಸುಲಿದು ಹಾಕಿದ ಜುಬ್ಬರ ಎತ್ತರಕೆ ಬಿದ್ದಿತ್ತು. ಕಾಯಿ – ಕರ್ಪೂರ , ಊದುಬತ್ತಿ ಮಾರುವವರು ಆಗಲೇ ಅಲ್ಲಿ ಟಿಕಾಣಿ ಹೂಡಿದ್ದರು.ಹತ್ತಾರು ಹೋಟೆಲುಗಳು ಅಗಲೇ ಸುರುವಾಗಿದ್ದವು. ಶರಣಬಸಪ್ಪ ಹಾವಾಗಿ ಪ್ರತ್ಯಕ್ಷವಾಗಿದ್ದಾನೆಂದು ಹೇಳಲಾಗುವ ಹುತ್ತದ ಸುತ್ತ ಮುತ್ತ ಬಾರಿ ಪೆಂಡಾಲು ಹಾಕಲಾಗಿತ್ತು. ಪೆಂಡಾಲು ಸಮೀಪಿಸುತ್ತಿದ್ದಂತೆ ನನ್ನ ಗುರ್ತು ಹಿಡಿದ ಬಹಳಷ್ಟು ಮಂದಿ ಜನರನ್ನು ಅತ್ತ – ಇತ್ತ ಸರಿಸುತ್ತ " ಪತ್ರಿಕೆಯವರು ಬಂದಿದ್ದಾರೆ . ಸರಿ..ರೀ...... " ಎಂದು ಒಂದೆ ಸಮ ಸಡಗರಿಸಿದರು.

# ಕತೆ

ನಾನು ಆ ಹುತ್ತದ ಸುತ್ತಲೇ ಬಗ್ಗಿ ಬಗ್ಗಿ ನೋಡುತ್ತ , ಹಾವಿನ ರೂಪದಲ್ಲಿ ಪ್ರತ್ಯಕ್ಷನಾದ ಶರಣನನ್ನು ಹುಡುಕುತ್ತಿದ್ದೆ. ನನಗೆ ಸ್ಪಷ್ಟವಾಗಿ ಗೋಚರವಾಗಲಿಲ್ಲ. ಕೊನೆಗೆ ಬೇಸರಿಸಿಕೊಂಡು :

" ಹಾವು ಎಲ್ಲ್ಯಾದೋ...... !? ಕಾಣ್ಸಾವಲ್ಲದಲ್ಲ !!

ಎಂದು ಹುತ್ತದ ಸುತ್ತ ಮುತ್ತ ನನ್ನ ದೃಷ್ಟಿಯನ್ನು ಮತ್ತಷ್ಟು ಚುರುಕುಗೊಳಿಸಿಕೊಂಡು ನೋಡಿದೆ. ನಿಜಕ್ಕೂ ಅದು ಹಾವೇ ಆಗಿರಲಿಲ್ಲ. ಅದೊಂದು ಗೊಡಚಿ ಹುಳವಾಗಿತ್ತು. ಅದಕ್ಕೂ ಯಾವುದೋ ರೋಗ ಬಂದು ಈಗಲೋ – ಆಗಲೋ ಸಾಯುವ ಸ್ಥಿತಿಯಲ್ಲಿ ಇತ್ತು. ಒಮ್ಮಿದೊಮ್ಮೆ ತನ್ನ ಸುತ್ತ ಜನ ಮುಕುರಿಕೊಂಡದ್ದಕ್ಕೋ ಏನೋ ಗಾಭರಿಯಿಂದ ನೆಲಕ್ಕೆ ಮುಖ ಮಾಡಿಕೊಂಡು ಅಳುತ್ತಿರುವಂತೆ ಕಂಡುಬಂತು.

ಕಡ್ಡಿಯಂತಿರುವ ಈ ಹುಳು ಫೋಟೋದಲ್ಲಿ ಬರುತ್ತದೋ ? ಇಲ್ಲವೋ ? ಎಂಬ ಅನುಮಾನದಿಂದಲೆ ಫೋಟೋ ಕ್ಲಿಕ್ಕಿಸಿದೆ. ಆಗಲೇ ಅಲ್ಲಿ ಅಮರಿಕೊಂಡಿದ್ದ ಪೂಜಾರಿಯ ಫೋಟೋ ತೆಗೆಯಲು ಉದ್ಯುಕ್ತನಾದಾಗ ಆತ ಗಾಭರಿಗೆ ಬಿದ್ದವನಂತೆ :

" ಸರ್.... ನನ್ನ ಫೋಟೋ ಬೇಡ. ಅಪ್ಪನ (ಹಾವಿನ) ಫೋಟೋ ತೆಗೆದಿರಲ್ಲ ಅಷ್ಟೇ ಸಾಕು. ಅದನ್ನೆ ಬರೆಯಿರಿ "

ಎಂದು ತಾಕೀತು ಮಾಡಿದ.ಜನವೂ ಆತನ ಮಾತಿಗೆ ' ಹೂಂ ' ಗುಟ್ಟಿದರು. ಆದರೆ ಆತನ ಮುಖ ಅನಾವರಣವಾದಂತಾಗಿ ಬಿಳುಚಿಕೊಂಡಿತು. ಅ ಛಳಿಯ ದಿನಗಳಲ್ಲೂ ಆ ಪೂಜಾರಿ ಬೆವತು ಹೋಗಿದ್ದ.

ಯಾರ್‍ಯಾರೋ ತಂದು ಈ ಪೂಜಾರಿಗೆ ಆಗಲೇ ವಸ್ತ್ರ ದಾನ ಮಾಡಿದ್ದರು. ಹಣ ಕೊಟ್ಟರು. ಕೆಲವರು ಬಂಗಾರವನ್ನು ನೀಡಿದರು. ನೋಡ ನೋಡುತ್ತಿರುವಂತೆ ಒಂದು ಕಮೀಟಿಯೇ ಸಿದ್ಧವಾಗಿತ್ತು. ರಶೀದಿ ಪುಸ್ತಕಗಳು ಹಿಡಿದು ಆ ಹುತ್ತದ ಸುತ್ತ ಮುತ್ತ ನಿಂತ ನಾಲ್ಕೆಂಟು ಜನ

" ಮುತ್ತ್ಯಾನಿಗೆ ಕಾಣಿಕೆ ಬರಸ್ರೀ...... ಈ ಜಾಗದಲ್ಲಿ ಮುತ್ತ್ಯಾನ ಗದ್ದೀಗಿ ಕಟ್ಟಸಬೇಕಾಗ್ಯಾದ.... ಈ ಜಾಗವನ್ನು ಈಗಾಗಲೇ ಫಾಳೆಪ್ಪ ಪೂಜಾರಿ ಮಠಕ್ಕ ದಾನವಾಗಿ ನೀಡ್ಯಾನ.... ನೀವೂ ದಾನ ಧರ್ಮ ಮಾಡ್ರಿ.... ಮುತ್ತ್ಯಾನ ಕೃಪೆ ಪಾತ್ರರಾಗ್ರಿ.... "

ಇದನ್ನು ಕೇಳಿ ಭಾವಾವೇಶಕ್ಕೆ ಒಳಗಾದ ಫಾಳೆಪ್ಪ ಹೊಲದ ಮಗ್ಗುಲಿಗೆ ಇದ್ದ ಚಂದ್ರಾಮಪ್ಪ ,ಭೀಮರಾಯ, ಪಂಪಣ್ಣ ಎಲ್ಲೋರು ತಮ್ಮ ಪಾಲಿನ ಎರಡೆರಡು ಎಕರೆ ಭೂಮಿಯನ್ನು ಮುತ್ತ್ಯಾನ ಗುಡಿ ಕಟ್ಟುವುದಕ್ಕೆ ದಾನವಾಗಿ ಕೊಡಲು ಮುಂದಾಗಿದ್ದರು.ಅಲ್ಲಿ ನೆರೆದಿದ್ದ ಭಕ್ತಗ್ರೇಸರರು. ಚಪ್ಪಾಳೆ ಹೊಡೆದು ಇವರ ದಾನದ ಗುಣವನ್ನು ಕೊಂಡಾಡಿದ್ದೇ ಕೊಂಡಾಡಿದ್ದು.

ಈ ಸಂಗತಿಗಳೆಲ್ಲ ತನ್ನ ಭಕ್ತಾಧಿಗಳ ಮೂಲಕ ಕೇಳಿಸಿಕೊಂಡ ಈಗಿನ ಮಠದ ಪೀಠಾಧೀಕಾರಿಯಾದ ಪೂಜ್ಯ ಶ್ರೀಶ್ರೀಶ್ರೀಗುರುಪಾದಾನಂದ ಮಹಾಸ್ವಾಮಿಗಳು ಕೇಳಿಸಿಕೊಂಡುದೊಂದೆ ತಡ ಆನಂದ ತುಂದಿಲರಾದರಂತೆ. ಅವರೇ ನೇರ ಈ ಸ್ಥಳಕ್ಕೆ ಬಂದು ನಿಂತು , ಮುತ್ತ್ಯಾರ ಅಡಿದಾವರೆಗಳಿಗೆ ಎರಕಿ ಬಹಳ ಹೊತ್ತು ಧ್ಯಾನಸ್ಥರಾಗಿ ನಿಂತುಬಿಟ್ಟರು.ಅಲ್ಲಿ ಸೇರಿದ್ದ ಭಕ್ತರೆಲ್ಲ ತುಟಿ ಪಿಟಕ್ ಅನ್ನದೆ ಮೌನ ಸಮಾಧಿಸ್ಥಿತಿಗೆ ಇಳಿದರು. ಅಗ ಮಹಾಸ್ವಾಮಿಗಳ ಚಲನವಲನ ಅರಿತವರಂತೆ ಅವರ ಹಿಂಬಾಲಕರು, ಪೂಜ್ಯ ಶ್ರೀಶ್ರೀಶ್ರೀ ಗುರುಪಾದಾನಂದ ಸ್ವಾಮಿಗಳಿಗೆ ಜಯವಾಗಲಿ. ಜಯವಾಗಲಿ ಎಂಬ ಘೋಷವಾಕ್ಯ ಮುಗಿಲು ಮುಟ್ಟುತ್ತಿತ್ತು.

ಅವರಲ್ಲಿ ಐದಾರು ಜನ ಸ್ವಾಮಿಯನ್ನು ಸುತ್ತುವರೆದು ಜನರನ್ನು ಸರಿಸುತ್ತ

ಅಪ್ಪಾವರು ಭಕ್ತರನ್ನು ಉದ್ದೇಶಿಸಿ ನಾಲ್ಕು ಆಶೀರ್ವಚನ ಹೇಳಬೇಕು ಎಂದರು

## ಕತೆ

ಕೆಂಪನೆಯ ಕುತನಿ ಖುರ್ಚಿಯ ಮೇಲೆ ಆಸೀನರಾದ ಸ್ವಾಮಿಯಾದರೋ ಗಳಗಂಡ ರೋಗಕ್ಕೆ ತುತ್ತಾದವರಂತೆ ಕಂಠವನ್ನು ಉಂಡುಂಡು ಬಾಯಿಸಿಕೊಂಡಿದ್ದರು. ಸರ್ವಸಂಗ ಪರಿತ್ಯಾಗಿಯಾದ ಸ್ವಾಮಿಯ ಹತ್ತು ಬೆರಳುಗಳಿಗೂ ಬಂಗಾರದ ಉಂಗುರಗಳು ಅಲಂಕರಿಸಿದ್ದವು. ಮಿರಿ ಮಿರಿ ಮಿಂಚುವ ರೇಶ್ಮೆ ವಸ್ತ್ರಧಾರಿಗಳಾದ ಪೂಜ್ಯರು ಬಾಯಿ ತೆಗೆದು ನಿಂತರೆ ಮುತ್ತು ರತ್ನಗಳೇ ಉದುರುತ್ತವೆ ಎನ್ನುವುದು ಮೇಲ್ನೋಟಕ್ಕೆ ಅವರನ್ನು ಗಮನಿಸಿದ ಯಾರಾದರೂ ಹೇಳಬಹುದು. ಸ್ವಾಮಿಗಳ ಅಣಿ ಮುತ್ತುಗಳು ಉದುರತೊಡಗಿದವು.

" ಭಕ್ತರೇ ನೀವು ಅರಾಮವಾಗಿ ಇರಬೇಕಂದ್ರ ನಮಗ ಆಗಾಗ ದಾನ - ಧರ್ಮ ಮಾಡಬೇಕು. ಗುರುವಿಗೆ ಗುಲಾಮ ಆಗೋ ತನಕ ದೊರೆಯದಣ್ಣ ಮುಕುತಿ ಅಂತಾರ. ನೀವು ನಮ್ಮಗ ಗುಲಾಮರಾಗದ ಹೊರ್ತು ನಿಮಗ ಸ್ವರ್ಗ ಸಿಗೋದಿಲ್ಲ. ಸತ್ತ ಮ್ಯಾಲ ಅತ್ತಿತೋ ಕತ್ತಿ ಮೂಳ ಆಗಬಾರದಂದ್ರ ಇರೋದ್ರಾಗೆ ದಾನ ಮಾಡಬೇಕು. ನಮ್ಮಂತ ಸತ್ಪುರುಷರ ಸೇವೆ ಮಾಡಬೇಕು.ಬರೋ ವರ್ಷ ಒಪ್ಪತ್ತಿನ್ಯಾಗ ಇಲ್ಲಿ ಇದೇ ಜಾಗದಾಗ ಶರಣಪ್ಪನೋರ ತೇರು ಎಳಿತೀವಿ. ನೀವೆಲ್ಲ ಕೂಡಿ ಜಾತ್ರಿ ಮಾಡಬೇಕು. ಮುತ್ತ್ಯಾನ ಕೃಪೆಗೆ ಪಾತ್ರರಾಗಬೇಕು.......... "

ಎಂದು ಅಪ್ಪಾವರ ಮಾತು ಮುಗಿಯುತ್ತಿದ್ದಂತೆ ಮುತ್ತ್ಯಾವರು ಪ್ರತ್ಯಕ್ಷವಾದ ಜಾಗವನ್ನು ಮಠಕ್ಕೆ ದಾನವಾಗಿ ನೀಡಿದ ಫಾಳೆಪ್ಪ, ಚಂದ್ರಾಮಪ್ಪ, ಪಂಪಣ್ಣ, ಭೀಮರಾಯ ಮುಂತಾದವರನ್ನು ಸ್ವಾಮಿಜಿಯ ಶಿಷ್ಯ ವೃಂದ ಅಕ್ಷರಶಃ ಸ್ಟೇಜ್ ಮೇಲೆ ಎಳೆದು ತಂದಿದ್ದರು.

ಹರಕೆಯ ಕುರಿಗಳಂತಾಗಿದ್ದ ಎಲ್ಲರೂ ತಲೆಬಗ್ಗಿಸಿ ಅಪ್ಪಾವರ ಪಾದಾರವಿಂದಗಳಿಗೆ ಎರಗಿ , ಅವರು ಹೊಚ್ಚಿದ ಶಾಲು ಬಾಡಿಹೋದ ಹಾರವನ್ನು ಕೊರಳಲ್ಲಿ ಹಾಕಿಕೊಂಡು ಆ ಜನಸಂದಣಿಯ ನಡುವೆ ನಡೆದಾಡುತ್ತಿದ್ದರೆ, ಹಬ್ಬಕ್ಕೆ ತಂದ ಹರಕೆಯ ಕುರಿಗಳಾಗಿದ್ದರು.

ಇದನ್ನೆಲ್ಲ ನೆನೆಸಿಕೊಳ್ಳುತ್ತ ಮನೆಗೆ ಬರುತ್ತಿರುವಂತೆ ಮನೆಯಲ್ಲಿ ಹಾಕಿದ್ದ ಟೇಪು ಹಾಡುತ್ತಿತ್ತು :

ಅಜ್ಞಾನವೆಂಬ ತೊಟ್ಟಿಲೊಳಗೆಜ್ಞಾನವೆಂಬ ಶಿಶುವ ಮಲಗಿಸಿ
ಸಕಲ ವೇದಶಾಸ್ತ್ರವೆಂಬ ನೇಣಕಟ್ಟಿ ತೊಟ್ಟಿಲ ತೂಗಿ
ಜೋಗುಳವಾಡುತ್ತಿದ್ದಾಳೆ , ಭ್ರಾಂತಿ ಎಂಬ ತಾಯಿ

# ಬರೆದಂತೆ ಬದುಕಿದ ಮಹಾಕವಿ ಕುವೆಂಪು

( ೨೦ನೇ ಪುಟದಿಂದ )

ಕುವೆಂಪು ಅವರ ವೈಚಾರಿಕತೆಯ ಪ್ರಸ್ತಾಪವನ್ನು ಅವರ ಜೀವನದ ಎರಡು ಘಟನೆಗಳನ್ನು ಸ್ಮರಿಸಬಹುದು : ತಮ್ಮ ಮೂವ್ವತ್ತೆರಡನೆಯ ವಯಸ್ಸಿನಲ್ಲಿ ಮದುವೆಗೆ ಒಪ್ಪಿಗೆ ಸೂಚಿಸುತ್ತ, ಶ್ರೀ ಮಂಜಪ್ಪಗೌಡರಿಗೆ ಹೀಗಂತ ಬರೆದರು.

"ಜಾತಕದಲ್ಲಿ ನನಗೆ ನಂಬಿಕೆ ಇಲ್ಲ. ನನಗೆ ಈ ಕಗ್ಗದಲ್ಲಿ ಸಹನೆಯಿಲ್ಲ "

ಇನ್ನೊಂದು ಸಂಗತಿ :

"ಅವರು ತಮ್ಮ ಜೀವನಮಾನದಲ್ಲಿ ದೇವರ ಗುಡಿಗಳಿವೆ ಹೋಗಲೆ ಇಲ್ಲ !"

"ಗುಡಿ - ಚರ್ಚು - ಮಸೀದಿಗಳ ಬಿಟ್ಟು ಹೊರಬನ್ನಿ "ಎಂದು ಕವಿತೆ ಬರೆದು. ಗುಡಿಗಳಿಗೆ ಹೋಗಿ ಅಡ್ಡಬಿದ್ದರೆ ಜನ ಅಂಥವರನ್ನು ನಂಬುತ್ತಾರೆಯೆ ?

ಬರೆದಂತೆ ಬದುಕಿದ ಮಹಾಕವಿ ಕುವೆಂಪು.



# ಮದುವೆ ಮಾಡಲು ಹೋಗಿ ಮಣ್ಣು ಮಾಡಿದ್ದು !

೦ ಶಿವಣ್ಣ ಇಜೇರಿ , ಶಹಾಪುರ

ಅದೊಂದು ಯಾವುದೆ ಮೂಲಭೂತ ಸೌಕರ್ಯಗಳಿಲ್ಲದ ಕುಗ್ರಾಮ. ಅದು ತಾಲೂಕಿನ ಕೊನೆಯಲ್ಲಿ ಇರುವ ಕಟ್ಟಕಡೆಯ ಹಳ್ಳಿ. ಅಲ್ಲಿ ಆಗ ಲೈಟಿನ ವ್ಯವಸ್ಥೆ ಕೂಡ ಇರಲಿಲ್ಲ. ಆ ಮೂರಲ್ಲಿ ಕುರುಬರು ಮತ್ತು ದೊರೆಗಳ ವಂಶಸ್ಥರೆ ಜಾಸ್ತ. ಲಿಂಗಾಯತರ ಮನೆಗಳೆಂದರೆ ಒಂದೆರಡು ಬಣಜಿಗರ ಮತ್ತು ಐದಾರು ಕುಂಬಾರರ ಮನೆಗಳಿದ್ದವು. ಕುಂಬಾರ ಮನೆಗಳಿಗೆ ಹಿರಿಯನಾದ ಭೀಮಣ್ಣನೆ ಅವರ ನಾಯಕ. ಎಲ್ಲ ವರ್ಗದ ಜನರು ಪರಸ್ಪರ ಪ್ರೀತಿ ವಿಶ್ವಾಸ ಹಾಗೂ ಗೌರವಗಳಿಂದ ನಡೆದುಕೊಳ್ಳುತ್ತಿದ್ದರು. ಕಷ್ಟ ಸುಖದಲ್ಲಿ ಪರಸ್ಪರರು ಭಾಗಿಯಾಗಿ ಬದುಕುತ್ತಿದ್ದರು.

ಭೀಮಣ್ಣನ ಮಗಳನ್ನು ಸುರಪುರದ ಕರಡಕಲ್ಲ ಗ್ರಾಮಕ್ಕೆ ತಮ್ಮ ಬಂಧುಗಳ ಮನೆಗೆ ಕೊಟ್ಟು ನಿಶ್ಚಯಕಾರಣ ಮಾಡಿದ್ದರು. ಲಗ್ನವು ಗಂಡಿನವರ ಕಡೆಗೆ ಇದ್ದು ಅವರು ಮದುವೆ ದಿನಾಂಕವನ್ನು ನಿರ್ಧಾರ ಮಾಡಿ, ಲಗ್ನ ಪತ್ರಿಕೆ ಹಂಚಿ ಊರ ಪದ್ಧತಿಯಂತೆ ಇಡೀ ಊರಿಗೆ ಊಟ ಕೊಡುವುದಕ್ಕೆ ಎಲ್ಲರಿಗೂ ಬಿನ್ನಹ ಕೊಟ್ಟು ನಾಳೆ ಊರ ಊಟ ಇದೆ ಎಂದು ಅಡುಗೆಯ ತಯಾರಿಯಲ್ಲಿ ಇದ್ದರು.

ಕನ್ಯೆಯ ಊರಾದ ಶ್ರೀನಿವಾಸಪುರಲದಲ್ಲಿ ಹೆಣ್ಣಿನವರು ಎಲ್ಲಾ ವ್ಯವಸ್ಥೆ ಮಾಡಿಕೊಳ್ಳುತ್ತಿರುವಾಗ ವಿಧಿಯ ಆಟ ಬಲ್ಲವರಾರು ಎನ್ನುವಂತೆ ಹೆಣ್ಣಿನ ತಂದೆ ಭೀಮಣ್ಣ ಹೃದಯಾಘಾತದಿಂದ ತೀರಿಕೊಳ್ಳುತ್ತಾನೆ. ಬಂಧು ಬಳಗದ ಗೆಳೆಯರು ಎಲ್ಲರೂ ನಾಡದ್ದು ಲಗ್ನವಿದೆ ಹೀಗೇನು ಮಾಡುವುದು ? ಚಿಂತಿಸುತ್ತಿರುವಾಗ

ಭೀಮಣ್ಣನ ಅಳಿಯನಾದ ವಿರೂಪಾಕ್ಷಪ್ಪ ಬಂದು " ಈಗ ಆದದ್ದು ಆಗಿದೆ ಮೊದಲು ಮಾವನ ಮಣ್ಣು ಮಾಡೋಣ "ಎಂದು ಊರ ಹಿರಿಯರನ್ನು ವಿಚಾರಿಸಿ "ಮದುವೆ ನಿರ್ಧಾರವಾಗಿದೆ ಪತ್ರಿಕೆ ಹಂಚಿದ್ದಾರೆ. ಅವರ ಊರಲ್ಲಿ ಊಟ ಕೂಡಾ ಕೊಟ್ಟಿದ್ದಾರೆ. ಲಗ್ನ ಮುಂದಕ್ಕೆ ಹಾಕೋದು ಬೇಡ. ಹೇಗೂ ಎಲ್ಲ ಬೀಗರು ಬಂದಿದ್ದೇವೆ ಮೊದಲು ಮಾವನ ಮಣ್ಣು ಮಾಡಿ ನಂತರ ನಾಳೆ ಸಾಯಂಕಾಲ ಬಂಡಿಕಟ್ಟಿಕೊಂಡು ನಾವೆಲ್ಲ ಕಲೆತು ಕರಡಕಲ್ಲಿಗೆ ಹೋಗೋಣ . ಮದುವೆ ಮುಗಿಸಿಕೊಂಡು ಊರಿಗೆ ಹೋಗೋಣ" ಎಂದು ಹೇಳಿದಾಗ ಅದಕ್ಕೆ ಎಲ್ಲರೂ ಒಪ್ಪಿ ಅಂದು ಭೀಮಣ್ಣನ ಶವ ಸಂಸ್ಕಾರ ಮುಗಿಸಿ ಅಲ್ಲೆ ರಾತ್ರಿ ಉಳಿದುಕೊಂಡು ಮರುದಿನ ಸ್ನಾನ ಪೂಜಾದಿಗಳನ್ನು ಮುಗಿಸಿಕೊಂಡು ಐದಾರು ಬಂಡಿಗಳನ್ನು ಕಟ್ಟಿಕೊಂಡು ಕರಡಕಲ್ಲಿಗೆ ಹೊರಡುತ್ತಾರೆ.

ಮುಂಜಾನೆ ಹೊತ್ತಿಗೆ ಕರಡಕಲ್ಲ ತಲುಪಿ, ಹೃದಯದಲ್ಲಿ ಇರುವ ಸಾವಿನ ನೋವನ್ನು ಸಹಿಸಿಕೊಂಡು ತಾಳ್ಮೆಯಿಮದ ಲಗ್ನದ ಎಲ್ಲಾ ಕ್ರಿಯೆಗಳನ್ನು ಮಾಡಿ ಮದುವೆಯನ್ನು ಸಾಂಗವಾಗಿ ನೆರವೇರಿಸಿ ಬೀಗರು ಮಾಡಿದ ಹೋಳಗಿ, ಹುಗ್ಗಿ , ಅನ್ನಸಾರು ಉಂಡು ಸಾಯಂಕಾಲ ತಮ್ಮ ಎತ್ತು ಬಂಡಿಗಳನ್ನು ಕಟ್ಟಿಕೊಂಡು ತಮ್ಮ ಊರ ಕಡೆ ಹೊರಡುತ್ತಾರೆ.

## ಒಂದು ಪ್ರಸಂಗ

ಸುಖ ಬಂದರೆ ಪುಣ್ಯದ ಫಲವೆನ್ನೆನು
ದುಃಖ ಬಂದರೆ ಪಾಪದ ಫಲವೆನ್ನೆನು
ನೀ ಮಾಡಿದಡಾಯಿತ್ತೆಂದೆನ್ನೇನು
ಕರ್ಮಕ್ಕೆ ಕರ್ತ್ರವೆ ಕಡೆ ಎಂದೆನ್ನೆನು
ಉದಾಸೀನವಿಡಿದು ಶರಣೆನ್ನೇನು
ಕೂಡಲಸಂಗಮದೇವಾ
ನೀ ಮಾಡಿದುಪದೇಶವು ಎನಗೀ ಪರಿಯಲಿ
ಸಂಸಾರವ ಸವೆಯ ಬಳಸುವೆನು

ಬದುಕಿನಲ್ಲಿ ಕಷ್ಟ – ಸುಖಗಳು ಒಂದು ನಾಣ್ಯದ ಎರಡು ಮುಖವಿದ್ದಂತೆ. ಅವು ಒಂದರೆ ನಂತರ ಒಂದು ಬಂದೆ ಬರುತ್ತವೆ. ಅದಕ್ಕೆ ಸಂಸಾರ ಸವೆಸಬೇಕೆ ಹೊರತು ಮುರಿದುಕೊಳ್ಳಬಾರದು ಎನ್ನುತ್ತಾರೆ ಬಸವಣ್ಣನವರು.

ಇಂತಹ ಪ್ರಸಂಗಗಳು ಎಲ್ಲರ ಬದುಕಿನಲ್ಲಿ ಬಂದೆ ಬರುತ್ತವೆ. ಆದರೆ ಧೈರ್ಯ ಮಾಡಿ ಮನೆಯವರಿಗೆ ಧೈರ್ಯ ತುಂಬಿ, ಮಾವನ ಮಣ್ಣು ಮಾಡಿ ಮಾವನ ಮಗಳ ಲಗ್ನವನ್ನು ಮಾಡಿಸಲು ಧೈರ್ಯವಾಗಿ ನಿಂತ ವಿರೂಪಾಕ್ಷಪ್ಪನವರಂತಹ ಜನರು ಊರಲ್ಲಿ ಒಬ್ಬರಾದರೂ ಇದ್ದರೆ ಆ ಊರು ಎಲ್ಲ ಕಾಲಕ್ಕೂ ನೆಮ್ಮದಿಯಿಂದ ಧೈರ್ಯದಿಂದ ಬದುಕುತ್ತದೆ ಅಲ್ಲವೆ ?

**ಬದುಕಿನಲ್ಲಿ ಕಷ್ಟ – ಸುಖಗಳು ಒಂದು ನಾಣ್ಯದ ಎರಡು ಮುಖವಿದ್ದಂತೆ. ಅವು ಒಂದರೆ ನಂತರ ಒಂದು ಬಂದೆ ಬರುತ್ತವೆ. ಅದಕ್ಕೆ ಸಂಸಾರ ಸವೆಸಬೇಕೆ ಹೊರತು ಮುರಿದುಕೊಳ್ಳಬಾರದು ಎನ್ನುತ್ತಾರೆ ಬಸವಣ್ಣನವರು.**

## ಬಂಡಾಯ ಮನೋಧರ್ಮದ ಪುಸ್ತಕ

ನನ್ನ ಮುದ್ದು ಶ್ರೀ ವಿಶ್ವಾರಾಧ್ಯ ಸತ್ಯಂಪೇಟೆ

ನಿಮ್ಮ ಅಧರಕ್ಕೆ ಕಹಿ , ಉದರಕ್ಕೆ ಸಿಹಿ ಕೃತಿಯ ಲೇಖನಗಳನ್ನು ಈ ಮೊದಲೆ ಆಸ್ಥೆಯಿಂದ ಓದಿದ್ದೆ. ಈಗ ಅವುಗಳನ್ನು ಸಂಗ್ರಹಿಸಿ ಕೊಟ್ಟುದು ಒಳ್ಳೆಯದಾಯಿತು.

ನಿಮ್ಮ ಹಿಂದಿನ ಕೃತಿಗಳನ್ನು ಒಳಗೊಂಡಂತೆ ಇಂದಿನ ಈ ಪುಸ್ತಕದವರೆಗಿನ ಬರವಣಿಗೆಯ ಪ್ರಮುಖ ಅಂಶವೆಂದರೆ ಪ್ರಖರವಾದ ವೈಚಾರಿಕತೆ ಹಾಗೂ ಬಂಡಾಯದ ಮನೋಧರ್ಮ. ಅದಕ್ಕೆ ತಕ್ಕ ಭಾಷಾ ಶೈಲಿಯನ್ನೂ ರೂಢಿಸಿಕೊಂಡಿರುವುದರಿಂದ ಇವೆಲ್ಲವೂ ಆಸಕ್ತಿಯಿಂದ ಓದಿಸಿಕೊಳ್ಳುತ್ತವೆ. ನಿಮ್ಮ ಮನಸ್ಸು ಗುಣ– ದೋಷಗಳೆರಡಕ್ಕೂ ಸಮಾನವಾಗಿ ಸ್ಪಂದಿಸುವುದರಿಂದ ಸಾಮಾಜಿಕ ಕಳಕಳಿಗೆ ಹೆಚ್ಚಿನ ಅರ್ಥ ಬರುತ್ತದೆ.

ವಿಚಾರ ಪ್ರಚೋದನೆಯಿಂದ ಚಿಂತನೆಗೆ ತೊಡಗಿಸಬಲ್ಲ ಕೃತಿಯನ್ನು ಕೊಟ್ಟುದಕ್ಕೆ ನಿಮ್ಮನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

ಧಾರವಾಡ

o ಡಾ. ಚೆನ್ನವೀರ ಕಣವಿ





# ನಮ್ಮ ಕೈಯ್ಯಲ್ಲಿರುವ ಆಯ್ಕೆ

ಏನ್ ಮಾಡೋಕಾಗುತ್ತೆ ಎಲ್ಲಾ ಹಣೆ ಬರಹ , ಆಗೋದು ಆಗೇ ಆಗುತ್ತೆ ಎಂದಾಗೆಲ್ಲ ನನಗೆ ರೇಗಿ ಹೋಗುತ್ತದೆ. ನಿಜ ಕೆಲವೊಮ್ಮೆ ಆಗುವುದನ್ನು ತಡೆಯಲು ಆಗದಿರಬಹುದು. ಆದರೆ ಪ್ರಯತ್ನಿಸಬಹುದಲ್ಲ. ಅದೃಷ್ಟವನ್ನೇ ಅವಲಂಬಿಸಿ ಬದುಕಲು ಸಾಧ್ಯವೆ ?

ನಾಲ್ಕು ವರ್ಷಗಳ ಹಿಂದೆ, ರಜೆಗೆಂದು ಮೈಸೂರಿನ ಅಮ್ಮನ ಮನೆಗೆ ಸಹಕುಟುಂಬ ಸಮೇತಳಾಗಿ ಹೋಗಿದ್ದೆ. ಆ ರಾತ್ರಿ ಇದ್ದಕ್ಕಿದ್ದಂತೆ ನನ್ನ ಗಂಡ ಕೀರ್ತಿಗೆ ಎಲ್ಲಿಲ್ಲದ ಕೆಳಹೊಟ್ಟೆಯ ನೋವು. ಅದೆಲ್ಲೋ ಬೆನ್ನಹಿಂಬದಿಯಲ್ಲಿ ಹುಟ್ಟಿ,ಕಿಬ್ಬೊಟ್ಟೆಯವರೆ ಹರಡಿ ನಿಂತ ನೋವಿನಲ್ಲಿ ಒದ್ದಾಡತೊಡಗಿದರು. ಮಿಷನ್ ಆಸ್ಪತ್ರೆಗೆ ಓಡಿದ್ದಾಯ್ತು. ಸೋನೋಗ್ರಫಿ ಮಾಡಿ ೮ ಮಿ.ಮೀ. ಉದ್ದದ ಮೂತ್ರಪಿಂಡದ ಕಲ್ಲಿದೆ ಎಂದು ತಿಳಿಸಿದರು. ಎರಡು ದಿನದ ಅನಂತರ ಶಸ್ತ್ರಚಿಕಿತ್ಸೆಗೆ ದಿನಾಂಕ ನಿಗದಿಯಾಯಿತು. ನೋವು ಕಡಿಮೆ ಮಾಡಲು ಮಾತ್ರೆ ಕೊಟ್ಟು ಕಳುಹಿಸಿದರು. ಮಾತ್ರೆ ತೆಗೆದುಕೊಂಡು ನನ್ನವರು ಮಲಗಿದಂತೆ, ನಾನು ಮನೆಯಿಂದ ಹೊರಬಿದ್ದೆ.

ಈ ಕಿಡ್ನಿ ಸ್ಟೋನ್ ಯಾಕಾಗುತ್ತೆ ತಿಳಿದುಕೊಳ್ಳಬೇಕಿತ್ತು. ಅಯ್ಯೋ ಕೆಲವರಿಗೆ ಆಗುತ್ತೆ, ಕೆಲವರಿಗೆ ಇಲ್ಲ, ಅವರವರ ಅದೃಷ್ಟ ಇಂಥ ಉತ್ತರಗಳು ನನಗೆ ತೃಪ್ತಿ ನೀಡಲಿಲ್ಲ. ಯರ್‍ಯಾರಿಗೆ ಕಿಡ್ನಿ ಸ್ಟೋನ್ ಆಗಿತ್ತು ಅಕ್ಕಪಕ್ಕದಲ್ಲಿ ವಿಚಾರಿಸಿದೆ. ಎದುರು ಮನೆಯ ಕಮಲಮ್ಮ ಮೇಡಂಗೆ ಆಗತ್ತು ಎಂದು ಕೇಳಿ ಅವರ ಮನೆಗೆ ಹೋದೆ. ಸಾಮಾನ್ಯವಾಗಿ ಗಂಡಸರಲ್ಲಿ ಮೂತ್ರ ಪಿಂಡದ ಕಲ್ಲುಗಳು ಹೆಚ್ಚು ಕಾಣಿಸಿಕೊಳ್ಳುವುದನ್ನು ನೋಡಿದ್ದೆ , ನಿಮಗೆ ಹೇಗೆ ಬಂತು ಮೇಡಂ ? ಅಂತ ಕೇಳಿದೆ. ಅವರ ಶಾಲೆಯಲ್ಲಿ ಮಹಿಳೆಯರಿಗೆ ಶೌಚಾಲಯವಿರಲಿಲ್ಲ. ಹಾಗಾಗಿ ಬೆಳಗ್ಗೆ ಮನೆಯಿಂದ ಹೊರಟ ಮೇಲೆ, ಮತ್ತೆ ಸಂಜೆ ಹಿಂದಿರುಗಿ ಬರುವವರೆಗೂ ಜಲಬಾಧೆಯನ್ನು ತಡೆದುಕೊಳ್ಳದೆ ಬೇರೆ ದಾರಿ ಇರಲಿಲ್ಲ. ನೀರು ಕುಡಿದರೆ ಶೌಚಾಲಯಕ್ಕೆ ಹೋಗಬೇಕಾಗುತ್ತದೆ ಎಂದು ಈ ಮಹಿಳೆ ದಿನವೆಲ್ಲ ನೀರು ಕುಡಿಯುವುದನ್ನೇ ಬಿಟ್ಟಿದ್ದರು. ಒಂದು ದಿನ ಹೆರಿಗೆ ನೋವನ್ನು ಮೀರಿಸಿದ ನೋವಿನಿಂದ ಬೊಬ್ಬೆ ಇಟ್ಟು ವೈದ್ಯರಲ್ಲಿ ಪರಿಶೀಲಿಸಿದಾಗ ಮೂತ್ರಪಿಂಡದ ಕಲ್ಲುಗಳಿರುವುದು ತಿಳಿದುಬಂತು. ಒಮ್ಮೆ ಅದರಿಂದ ಪಾರಾದ ಮೇಲೆ, ವಐದ್ಯರ ಸಲಹೆಯಂತೆ ಯಥೇಚ್ಛವಾಗಿ

ನೀರು ಕುಡಿಯುವ ಅಭ್ಯಾಸ ಮಾಡಿಕೊಂಡರು. ವೈದ್ಯರು ಹೇಳಿದ್ದ ಕೆಲವು ಆಹಾರದ ಬದಲಾವಣೆಗಳನ್ನೂ ಜಾರಿಗೆ ತಂದರು. ಕಳೆದ ಇಪ್ಪತ್ತು ವರ್ಷಗಳಲ್ಲಿ ಅವರಿಗೆ ಮೂತ್ರಪಿಂಡದ ಕಲ್ಲು ಕಾಣಿಸಿರಲಿಲ್ಲ.

ಮೂಲೆಮನೆ ಮುದ್ದೇಗೌಡರಿಗೂ ಮೂತ್ರಪಿಂಡದ ಕಲ್ಲಾಗಿತ್ತು ಎಂದು ತಿಳಿದಾಗ, ಅವರ ಮನೆಗೂ ಹೋದೆ. ಓಹ್ ಈಗದೇನೊ ದೊಡ್ಡ ಆಪರೇಷನ್ ಅಲ್ಲಮ್ಮ. ನಾನು ನಾಲ್ಕು ಬಾರಿ ಮಾಡಿಸಿಕೊಂಡಿದ್ದೇನೆ ಎಂದು ಅಂಗಿ ಎತ್ತಿ ತೋರಿಸಿದರು. ಎರಡು ದೊಡ್ಡದಾಗಿ ಕೊಯ್ದ ಗಾಯದ ಗುರುತು, ಇನ್ನೆರಡು ಸಣ್ಣದು. ಮೊದಲೆಲ್ಲ ಹೀಗೆ ಕತ್ತರಿಸುತ್ತಿದ್ದರು, ಈಗ ನೋಡಿ ಲೇಸರ್ ಬಂತು ತುಂಬ ಸುಲಭ ಹೇಳಿದರು. ಅಲ್ಲ ಅಷ್ಟು ಬಾರಿ ಕಲ್ಲು ಫಾರ್ಮ ಆಯ್ತಾ ? ಕೇಳಿದೆ. ಅಯ್ಯೋ ಒಮ್ಮೆ ಬಂದಮೇಲೆ ಆಗ್ತಾನೇ ಇರುತ್ತೆ , ಏನು ಮಾಡೋಕಾಗುತ್ತೆ ? ಉದಾಸೀನದಿಂದ ಹೇಳಿದರು. ನೀರು ಕುಡಿದ್ರೆ, ಹತೋಟಿಗೆ ಬರುತ್ತೆ ಅಂತಾರೆ ? ನಾನು ಹೇಳಿದೆ. ಅಯ್ಯೋ ಅದೆಲ್ಲ ಪಥ್ಯ ಯಾರು ಮಾಡೋಕೆ ಆಗುತ್ತೆ ? ಬಾಡು ತಿನ್ಬೇಡಿ, ಹಾಲಿನ ಪದಾರ್ಥಗಳನ್ನು ಜಾಸ್ತಿ ಸೇವಿಸಬೇಡಿ, ಸದಾ ನೀರು ಕುಡೀರಿ ಅಂತಾರೆ. ಅದೆಲ್ಲ ಆಗೋ ಮಾತಲ್ಲ ಬಿಡಿ ಎಂದು ತಲೆ ಕೊಡವಿದರು. ಹಿಂತಿರುಗಿ ಬಂದೆ ಕೀರ್ತಿಗೆ ಹೇಳಿದೆ. ನೋಡು, ನಿನ್ನ ಎದುರು ಎರಡು ಆಯ್ಕೆಗಳಿವೆ. ಏನೂ ಮಾಡದೆ ಮುದ್ದೇಗೌಡರ ತರಹ ಎರಡೆರಡು ಆಪರೇಷನ್ ಮಾಡಿಸಿಕೊಳ್ಳೋದು. ಇಲ್ಲ, ಕಮಲಮ್ಮ ಮೇಡಂ ತರಹ ಚೆನ್ನಾಗಿ ನೀರು ಕುಡಿಯೋದು. ಮೊಳದುದ್ದ ಪಂಜಾಬಿ ಲೋಟದಲ್ಲಿ ಹಾಲು ಕುಡಿಯೋದು ಕಡಿಮೆ ಮಾಡು. ೮ ಮಿ.ಮೀ. ಕಲ್ಲು ಈಗ ಕರಗೋದು ಕಷ್ಟ. ಆದರೆ ಇದೇ ಮೊದಲ ಮತ್ತು ಕೊನೆಯ ಆಪರೇಷನ್ ಆಗ್ಬೇಕು, ಈಗಿಂದ್ಲೇ ನೀರು ಕುಡಿಯೋಕೆ ಶುರು ಮಾಡೋಣ, ಎಳನೀರು ತರ್ತಿನಿ ಎಂದು ಹೊರಟೆ. ಅದೆಲ್ಲ ಆಮೇಲೆ ಆರಂಭಿಸೋಣ, ಈಗ ಕುಡಿದ ತತ್‌ಕ್ಷಣ ಕಲ್ಲೇನೂ ಕರಗೋಲ್ಲ ಬೇಸರದಿಂದ ಕೀರ್ತಿ ಹೇಳಿದರು, ಕರಗದೆ ಇರಬಹುದು, ಈಗಿನಿಂದಲೇ ಅಭ್ಯಾಸ ಮಾಡಿಕೋ ಗದರಿದೆ. ಕೊಳದಪ್ಪಲೆ ನೀರು ತಂದು ಇಟ್ಟೆ. ಎಳನೀರು ,ಬಾರ್ಲಿ ವಾಟರ್ ಸುರಿದೆ, ಎರಡು ದಿನ ನೀರು ಕುಡಿದೂ, ಕುಡಿದೂ, ನೀರಿನಲ್ಲಿ ಕೀರ್ತಿ ತೇಲಿ, ಮುಳುಗಿದ್ದರು. ಆಪರೇಷನ್ ದಿನ ಬಂತು. ಆಸ್ಪತ್ರೆಗೆ ಅಡ್ಮಿಟ್ ಆದದ್ದಾಯ್ತು. ಗಂಡಸು ನರ್ಸ್ ಬಂದು , ಶೇವ್ ಮಾಡಿ ಹೋದದ್ದಾಯ್ತು. ಇನ್ನೇನು ಆಪರೇಷನ್ ಥಿಯೇಟರಿಗೆ ಕರೆದೊಯ್ಯಬೇಕು. ಕಲ್ಲು ಇರುವ ಸ್ಥಳವೇನಾದರೂ ಚಲಿಸಿದ್ದರೆ ತಿಳಿಯಲು ಸೋನಾಗ್ರಫಿ ರೂಮಿಗೆ ಕರೆದೊಯ್ದರು. ಹುಡುಕಿಯೇ ಹುಡುಕಿದರು, ಎಲ್ಲಿ ಮೂತ್ರಪಿಂಡೆ ಕಲ್ಲು ? ಕಾಣಲೇ ಇಲ್ಲ, ಎರಡೇ ದಿನದಲ್ಲಿ ಮೊಗೆದು ಸುರಿದು ಕುಡಿದ ನೀರಿನಲ್ಲೆಲ್ಲೋ ಕರಗಿಹೋಗಿತ್ತು. ಅಂದಿನಿಂದ ನೀರಿನ ಮಹಿಮೆ, ನನ್ನ ಸಲಹೆಯ ಮಹಿಮೆ ಅರಿತ ಪತಿ ನೀರು ಕುಡಿದೂ, ಇಲ್ಲಿಯವರೆಗೂ ಮತ್ತೆ ಹೊಟ್ಟೆ ನೋವು ಎಂದಿಲ್ಲ. ಆಯ್ಕೆ ನಮ್ಮ ಕೈಯಲ್ಲಿದೆ.

೦ ಶೋಭಾಚಂದ್ರ ಬೆಂಗಳೂರು

# ಹೊಸತನದಿಂದ ಮಿಂಚುತ್ತಿರುವ ಸೈಕೋ ಡೈರೆಕ್ಟರ್



ಕನ್ನಡ ಚಿತ್ರರಂಗಕ್ಕೆ ತನ್ನದೆ ಆದ ಮೋಡಿ ಮಾಡಿದ , ತನ್ನ ವೈಶಿಷ್ಟ್ಯಗಳಿಂದಲೆ ಮಿಂಚುತ್ತಿರುವ ಸೈಕೋ ಚಿತ್ರದ ಡೈರೆಕ್ಟರ್ ದೇವದತ್ತನನ್ನು ಭೇಟಿಯಾಗಿ ಎಷ್ಟೋ ವರ್ಷಗಳು ಉರುಳಿ ಹೋಗಿದ್ದವು. ಮೂಲತಃ ಮೈಸೂರಿನ ಸರಗೂರಿನ ದೇವದತ್ತ ಕಾಲೇಜು ಕಲಿಕೆಯ ದಿನಗಳಿಂದಲೆ ತನ್ನ ವಿಶಿಷ್ಟ ಮ್ಯಾನರಿಸಂಗಳ ಮೂಲಕ ಮಿಂಚುತ್ತಿದ್ದ. ಕನ್ನಡ ಚಲನಚಿತ್ರ ತರಬೇತಿ ಕೇಂದ್ರದಲ್ಲಿ ನಾನು ಸಿನೇಮಾ ಅಟೋಗ್ರಫಿ ಕಲಿಯುತ್ತಿದ್ದರೆ , ಈ ದೇವದತ್ತ ಚಲನ ಚಿತ್ರ ನಿರ್ದೇಶನದಂತಹ ಗುರುತರವಾದ ವಿಷಯದತ್ತ ಆಸಕ್ತಿವಹಿಸಿದ್ದ.

ನಾಟಕ ಕಂಪನಿಗಳಲ್ಲಿ ಭಾಗವಹಿಸಿ ಪಾತ್ರ ನಿರ್ವಹಿಸುತ್ತಿದ್ದ ದೇವದತ್ತನ ಕಾಕನೆ ಈತನ ಚಲನಚಿತ್ರ ಆಕರ್ಷಣೆಗೆ ಮೂಲ ಕಾರಣಕರ್ತ್ರು. ಸೈಕೋ ಚಿತ್ರವನ್ನು ನೀವು ನೋಡಿದ್ದರೆ ಅಲ್ಲಿರುವ ಡೈಲಾಗ್ ಡಿಲೇವರಿ , ಪ್ರತಿ ಫ್ರೇಮ್ ಸಲ್ಲಿ ಬಣ್ಣಗಳನ್ನು ಕಾವ್ಯಾತ್ಮಕ ಹಾಗೂ ಭಾವನಾತ್ಮಕವಾಗಿ ಬಳಸಿಕೊಂಡ ರೀತಿಯಲ್ಲಿ ದೇವದತ್ತನ ವ್ಯಕ್ತಿತ್ವ ಅಡಗಿದ್ದು ಕಾಣಿಸುತ್ತದೆ. ಸೈಕೋದ ಮತ್ತೊಂದು ಹೈಲೈಟ್ ಎಂದರೆ ಅಲ್ಲಿಯ ತಾಂತ್ರಿಕ ಅದ್ದೂರಿತನ !

ಈ ತಾಂತ್ರಿಕ ಅದ್ದೂರಿತನದ ಹಿಂದೆ ಸಾಕಷ್ಟು ಪರಿಶ್ರಮವಿದೆ. ಇದೆಲ್ಲಕ್ಕಿಂತ ಮುಖ್ಯ ಗುರುವಿಗೂ ಮಿರಿದ ಶಕ್ತಿಯಲ್ಲಿ ದೇವದತ್ತ ತನ್ನ ಚಿತ್ರದಲ್ಲಿ ತೋರಿಸಿಕೊಂಡಿದ್ದಾನೆ. ಇದಕ್ಕೆಲ್ಲ ಮುಖ್ಯ ಪ್ರೇರಣಾಶಕ್ತಿ ನಟ - ನಿರ್ಮಾಪಕ ರವಿಚಂದ್ರನ್ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದಂತೆ.

ಹಿಂದೊಂದು ಸಂದರ್ಭದಲ್ಲಿ ಸರಿಯಾದ ಮಾರ್ಗದರ್ಶನ ಸಿಗದೆ ಗಾಂಧಿನಗರದಲ್ಲಿ ಅಂಡಲೆಯುತ್ತಿದ್ದ ಸಂದರ್ಭದಲ್ಲಿ ಕೈ ಹಿಡಿದು ನಡೆಸಿದವರೆ ರವಿಂದ್ರನ್‌ರಂತೆ ! ನಿರ್ದೇಶನ ಕಲಿಯ ದೃಷ್ಟಿಯಿಂದ ಅವರಿವರನ್ನು ಹುಡುಕುತ್ತಿರುವ ಸಂದರ್ಭದಲ್ಲಿಯೆ ದೇವದತ್ತಗೆ ಒಂದು ಸಲ ರವಿಚಂದ್ರನ್ ಸಿಕ್ಕರಂತೆ. ಅವರಾದರೋ ಸದಾ ನೂರಾರು ಕೆಲಸಗಳ ನಡುವೆ ತಮ್ಮನ್ನು ತಾವು ತೊಡಗಿಸಿಕೊಂಡ ಕಾಯಕಯೋಗಿ. ಅವರು ಅಂದು ಒಂದೆ ಒಂದು ಮುತ್ತಿನಂಥ ಮಾತು ಆಡಿದರಂತೆ.

ಸಂಪೂರ್ಣ ನಿನ್ನನ್ನು ನೀ ತೊಡಗಿಸಿಕೊಂಡು , ಎಲ್ಲಾ ಕೆಲಸ ಆಸಕ್ತಿಯಿಂದ ಕಲಿಯಬೇಕೆಂದರೆ ನನ್ನಲ್ಲಿ ನಾಳೆಯಿಂದಲೆ ಬಾ.... ಕೈತುಂಬಾ ಸಂಬಳ ನಿರೀಕ್ಷಿಸುವಂತ್ತಿದ್ದರೆ ಇನ್ನೆಲ್ಲಿಯಾದರೂ ನೋಡಿಕೋ ! ಎಂಬ ಅವರ ಮಾತೆ ದೇವದತ್ತಗೆ ಮಾರ್ಗದರ್ಶನ ಮಾಡಿತಂತೆ.

ಸುಮಾರು ವರ್ಷಗಳವರೆಗೆ 'ರವಿಚಂದ್ರನ್ ರಂತಹ ದೈತ್ಯ ನಟ-ನಿರ್ಮಾಪಕ - ಸಂಗೀತಗಾರನ ಅಡಿಯಲ್ಲಿ ಪಳಗುವ ಮಹತ್ವದ ಅವಕಾಶವನ್ನು ದೇವದತ್ತ ಪಡಕೊಂಡಿದ್ದಾರೆ. ಅಲ್ಲದೆ ರವಿಂಮ್ರನ್ ಅವರ ಜೊತೆಗೆ ಇದ್ದಾಗ ಅವರೊಟ್ಟಿಗೆ ಸಹ ನಿರ್ದೇಶಕರಾಗಿ ದುಡಿದ್ದಾರೆ.ಹಲವಾರು ಕಿರುತೆರೆಯ ಧಾರವಾಹಿಗಳಲ್ಲಿ ದುಡಿದ ಅನುಭವವೂ ದೇವದತ್ತನನ್ನು ಪಳಗಿಸಿಬಿಟ್ಟಿದೆ.

ಈ ಸಂದರ್ಭದಲ್ಲಿಯೆ ಅವರಿಗೆ ಸಾಫ್ಟವೇರ್ ಇಂಜನೀಯರ್ ಗೆಳೆಯನೊಬ್ಬನ ಪ್ರೋತ್ಸಾಹದಿಂದಲೆ ಸೈಕೋ ಎಂಬ ಚಲನಚಿತ್ರ ಸೆಟ್ಟೆರಿತಂತೆ. ಈ ಚಿತ್ರದ ಕತೆ, ಅದು ಬಿತ್ತರಗೊಳ್ಳುವ ರೀತಿ, ಕ್ರಮಿಸುವ ಹಾದಿ , ಅಲ್ಲಿಯ ಹಾಡುಗಳು ಎಲ್ಲವೂ ಹೊಸತನದಿಂದ ಕೂಡಿದವುಗಳೆ. ಕನ್ನಡ ಕವಿಗಳ ನವಿರು ಕವಿತೆಗಳನ್ನು ತನ್ನ ಚಿತ್ರಗಳಲ್ಲಿ ಅಳವಡಿಸುವುದು ಒಂದು ಬಗೆಯಾದರೆ, ಅವಕ್ಕೆ ಕೊರಳಾಗಿ ಕನ್ನಡದ ರಘುದೀಕ್ಷಿತ್ ಅವರನ್ನು ಆಯ್ಕೆ ಮಾಡಿಕೊಂಡದ್ದು ದೇವದತ್ತನ ಮತ್ತೊಂದು ಸಾಧನೆ. ನಿನ್ನ ಪೂಜೆಗೆ ಬಂದೆ ಮಾದೇಶ್ವರ ! ಎಂಬ ಹಾಡು ಇಂದು ಎಲ್ಲರ ಬಾಯಲ್ಲಿ ಜಿನುಗುಡಲು ಮುಖ್ಯ ಕಾರಣವೆ ರಘುದೀಕ್ಷಿತ್. ರಾಜ್ಯದ ಹೊರಗಡೆ ಈ ಗಾಯಕ ಎಷ್ಟೇ ಖ್ಯಾತಿಯ ಉತ್ತುಂಗಕ್ಕೆ ಏರಿದ್ದರೂ ತನ್ನ ಕನ್ನಡದ



ನೆಲದಲ್ಲಿ ಪರಕೀಯನಾಗಿಬಿಟ್ಟಿದ್ದ. ಯಾವಾಗ ಗೆಳೆಯ ದೇವದತ್ತನ ಚಿತ್ರ ರಿಲೀಜ್ ಆಯ್ತೋ , ಆಗ ರಘುದೀಕ್ಷಿತ್ ಮಿಂಚಿದ್ದೇ ಮಿಂಚಿದ್ದು.

ದೇವದತ್ತನ ಮತ್ತೊಂದು ವೈಶಿಷ್ಟ್ಯ ಹಾಗೂ ಧೈರ್ಯವೆಂಥದೆಂದರೆ ತನ್ನ ಚಿತ್ರದ ತುಂಬೆಲ್ಲ ಬರೀ ಹೊಸಬರನ್ನೆ ಹಾಕಿಕೊಂಡು ಚಿತ್ರ ಮಾಡಿರುವುದು. ಇಲ್ಲಿರು ನಟ : ಧನುಷ್ಯ ಹಾಗೂ ನಟಿ : ಅನಿತಾಭಟ್ ಕೂಡ ಕನ್ನಡ ಚಿತ್ರ ರಂಗದ ನ್ಯೂವ್ ಎಂಟ್ರಿಗಳೆ.

ಕನ್ನಡದ ಕುವೆಂಪುವಿನಿಂದ ಹಿಡಿದು ಅಸಾದುಲ್ಲಾಬೇಗ್ ಅವರಂತಹ ಕವಿಗಳ ಸಾಹಿತ್ಯವನ್ನು ಓದುವ ಹುಚ್ಚು ದೇವದತ್ತನಿಗೆ. ಸದಾ ತನ್ನನ್ನು ತಾನು ಓದುತ್ತ, ಹೊಸ ಕನಸುಗಳಿಗೆ ತನ್ನ ಮನಸ್ಸಿನ ಭೂಮಿಕೆಯನ್ನು ಸಿದ್ದಪಡಿಸುತ್ತ , ಕನವರಿಸುತ್ತಿರುವ ಸ್ನೇಹಿತ ದೇವದತ್ತನಿಗೆ ಬಯಸಿದ್ದೆಲ್ಲವೂ ದಕ್ಕಲಿ. ಈತನ ಪರಿಶ್ರಮಕ್ಕೆ ತಕ್ಕ ಪತ್ರಿಫಲ ಸಿಗಲಿ ಎಂದು ಪತ್ರಿಕೆಯ ಮೂಲಕ ಹಾರೈಸುತ್ತೇನೆ.

೦ ನರಸನಾಯಕ , ಶಹಾಪುರ

